॥ ಶ್ರೀಹರಿಃ ॥

# ವಿದುರನೀತಿಯ ಪ್ರಧಾನ ವಿಷಯಗಳ ಸೂಚಿ

## ಮೊದಲನೇ ಅಧ್ಯಾಯ

## ಮೂರನೇ ಅಧ್ಯಾಯ

| ಶ್ಲೋಕ | ವಿಷಯ | ಪುಟ |
|---|---|---|

## ಐದನೇ ಅಧ್ಯಾಯ

## ಆರನೇ ಅಧ್ಯಾಯ

## ಏಳನೇ ಅಧ್ಯಾಯ

| ಶ್ಲೋಕ | ವಿಷಯ | ಪುಟ |
|---|---|---|
| ೬೦-೬೪ | ಎಂತಹ ಸುಖವನ್ನು ಸದಾ ಅನುಭವಿಸಬೇಕು, ಯಾರ ಹತ್ತಿರ ಲಕ್ಷ್ಮಿ ನಿಲ್ಲುವುದಿಲ್ಲ, ಕೆಟ್ಟ ಜನರ ವ್ಯವಹಾರ, ಭಯ ಕಂಪಿತಳಾದ ಲಕ್ಷ್ಮಿ ಯಾರ ಸನಿಹ ಸುಳಿಯುವುದಿಲ್ಲ, ರಾಜ್ಯಲಕ್ಷ್ಮಿಯ ಸ್ವಭಾವ ಹೇಗಿರುತ್ತದೆ ........................................ | 145-146 |
| ೬೫-೬೮ | ಯಾವುದು ಯಾರ ಫಲ, ಎಂಥ ಕೆಲಸಗಳ ಫಲ ಪರಲೋಕದಲ್ಲಿ ಸಹಾಯಕ್ಕೆ ಬಾರವು, ಸತ್ತ್ವಸಂಪನ್ನರ ನಿರ್ಭಯತೆ ಹಾಗೂ ಪ್ರಗತಿಯ ಮೂಲ ಕಾರಣ ........................................ | 146-147 |
| ೬೯-೭೦ | ಯಾರಿಗೆ ಎಂತಹ ಬಲವಿರುತ್ತೆ, ವ್ರತಭಂಗವನ್ನು ಉಂಟುಮಾಡದ ಎಂಟು ವಸ್ತುಗಳು ಮತ್ತು ಸಂಕ್ಷಿಪ್ತವಾಗಿ ಧರ್ಮದ ಸ್ವರೂಪ...... | 147-148 |
| ೭೨-೭೬ | ಯಾರು ಯಾರನ್ನು ಗೆಲ್ಲಬೇಕು, ಎಂಥಹವರಲ್ಲಿ ಭರವಸೆ ಇಡಬಾರದು, ಪ್ರತಿನಿತ್ಯ ಗುರುಹಿರಿಯರ ವಂದನೆಯಿಂದ ಆಗುವ ಲಾಭ, ಹಣವೊಂದೇ ಮುಖ್ಯವೆಂಬ ಮನಸ್ಸನ್ನು ಹೇಗೆ ನಿಯಂತ್ರಿಸಬೇಕು, ಮತ್ತು ಯಾವುದರ ಬಗ್ಗೆ ದುಃಖಿಸಬೇಕು. .... | 148-149 |
| ೭೭-೮೧ | ಯಾರಿಗೆ ಯಾವುದು ವೃದ್ಧಾಪ್ಯ, ಯಾರಿಗೆ ಯಾವುದು ಮಲ, ಯಾವುದರಿಂದ ಏನನ್ನು ಗೆಲ್ಲುವ ಪ್ರಯಾಸ ಮಾಡಬಾರದು ...... | 149-150 |
| ೮೨-೮೫ | ಯಾರ ಜೀವನ ಸಫಲ, ಲೋಭ ಹಾಗೂ ಕಾಮನೆಗಳನ್ನು ಪರಿತ್ಯಜಿಸಬೇಕು, ಸಮಗ್ರ ಜಗತ್ತಿನ ಸುಖ ಒಬ್ಬನಿಗೆ ಸಾಕಾಗುವುದಿಲ್ಲ, ತಮ್ಮ ಮಕ್ಕಳ ಜೊತೆ ಹಾಗೂ ಪಾಂಡವರ ಜೊತೆ ಸಮಾನ ವ್ಯವಹಾರ ಮಾಡಲು ಧೃತರಾಷ್ಟ್ರನಲ್ಲಿ ಆಗ್ರಹ............. | 150 |

## ಎಂಟನೇ ಅಧ್ಯಾಯ

| | | |
|---|---|---|
| ೧-೩ | ಯಶಸ್ಸು ಮತ್ತು ಸುಖ ಯಾರಿಗೆ ಬಹುಬೇಗನೇ ಸಿಗುತ್ತದೆ, ದುಃಖಗಳಿಂದ ಮುಕ್ತನಾಗಿ ಸುಖವಾಗಿ ನಿದ್ದೆ ಮಾಡುವವನು ಯಾರು, ಬ್ರಹ್ಮಹತ್ಯೆಗೆ ಸಮಾನವಾದಂತಹ ಮೂರು ಕುಕೃತ್ಯಗಳು. | 151 |
| ೪ | ಸಾವೆಂದರೇನು, ಲಕ್ಷ್ಮಿಯ ವಧೆ ಹೇಗಾಗುತ್ತೆ ಮತ್ತು ವಿದ್ಯೆಯ ಮೂರು ಶತ್ರುಗಳು ಯಾರು ........................................ | 151-152 |
| ೫-೬ | ವಿದ್ಯಾರ್ಥಿಗಳ ಏಳು ದೋಷಗಳು, ಸುಖಾರ್ಥಿ-ವಿದ್ಯಾರ್ಥಿಗಳ ಲಕ್ಷಣ........................................ | 152 |
| ೭-೧೧ | ಯಾರಿಗೆ ಯಾವುದರಿಂದ ತೃಪ್ತಿಯಾಗುವುದಿಲ್ಲ, ಯಾರು ಯಾರನ್ನು ಹಾಳು ಮಾಡುತ್ತಾರೆ ಮತ್ತು ಮನೆಯಲ್ಲಿ ಇಡಬಹುದಾದಂತಹ ವಸ್ತುಗಳು. ........................................ | 152-153 |

॥ ಶ್ರೀಹರಿಃ ॥

# ವಿದುರ ನೀತಿ

## ಕನ್ನಡ ಅನುವಾದ ಸಹಿತ

## ಮೊದಲನೇ ಅಧ್ಯಾಯ

**ವೈಶಂಪಾಯನ ಉವಾಚ**

**ದ್ವಾಃಸ್ಥಂ ಪ್ರಾಹ ಮಹಾಪ್ರಾಜ್ಞೋ ಧೃತರಾಷ್ಟ್ರೋ ಮಹೀಪತಿಃ ।**
**ವಿದುರಂ ದ್ರಷ್ಟುಮಿಚ್ಛಾಮಿ ತಮಿಹಾನಯ ಮಾ ಚಿರಮ್ ॥ ೧ ॥**

**ವೈಶಂಪಾಯನನು ಹೇಳಿದನು** - (ಸಂಜಯನು ಹೊರಟು ಹೋದದ್ದನ್ನು ತಿಳಿದು) ಮಹಾಬುದ್ಧಿವಂತನಾದ ರಾಜಾ ಧೃತರಾಷ್ಟ್ರನು ದ್ವಾರಪಾಲಕನನ್ನುದ್ದೇಶಿಸಿ ಹೇಳಿದನು – 'ನಾನು ವಿದುರನನ್ನು ನೋಡಲು ಬಯಸುವೆ. ಅವನನ್ನು ಬೇಗನೆ ಇಲ್ಲಿಗೆ ಕರೆದುಕೊಂಡು ಬಾ.' ॥ ೧ ॥

**ಪ್ರಹಿತೋ ಧೃತರಾಷ್ಟ್ರೇಣ ದೂತಃ ಕ್ಷತ್ತಾರಮಬ್ರವೀತ್ ।**
**ಈಶ್ವರಸ್ತ್ವಾಂ ಮಹಾರಾಜೋ ಮಹಾಪ್ರಾಜ್ಞ ದಿದೃಕ್ಷತಿ ॥ ೨ ॥**

ಧೃತರಾಷ್ಟ್ರನಿಂದ ಕಳುಹಿಸಲ್ಪಟ್ಟ ಆ ದೂತನು ವಿದುರನ ಬಳಿ ಸಾರಿ ಹೀಗೆ ಹೇಳಿದನು - 'ಮಹಾಮೇಧಾವಿಯೇ ! ನಮ್ಮ ಒಡೆಯನಾದ ಮಹಾರಾಜ ಧೃತರಾಷ್ಟ್ರನು ನಿನ್ನನ್ನು ನೋಡಲು ಬಯಸುತ್ತಾನೆ.' ॥ ೨ ॥

**ಏವಮುಕ್ತಸ್ತು ವಿದುರಃ ಪ್ರಾಪ್ಯ ರಾಜನಿವೇಶನಮ್ ।**
**ಅಬ್ರವೀದ್ ಧೃತರಾಷ್ಟ್ರಾಯ ದ್ವಾಃಸ್ಥ ಮಾಂ ಪ್ರತಿವೇದಯ ॥ ೩ ॥**

ಹೀಗೆಂದು ದ್ವಾರಪಾಲಕನಿಂದ ಸೂಚಿಸಲ್ಪಟ್ಟ ವಿದುರನು ರಾಜಭವನಕ್ಕೆ ಬಂದು ಹೇಳಿದನು - 'ದ್ವಾರಪಾಲಕನೇ ! ಧೃತರಾಷ್ಟ್ರನಿಗೆ ನಾನು ಬಂದಿರುವ ವಿಷಯವನ್ನು ತಿಳಿಸು.' ॥ ೩ ॥

**ದ್ವಾಃಸ್ಥ ಉವಾಚ**

**ವಿದುರೋಽಯಮನುಪ್ರಾಪ್ತೋ ರಾಜೇಂದ್ರ ತವ ಶಾಸನಾತ್ ।**
**ದ್ರಷ್ಟುಮಿಚ್ಛತಿ ತೇ ಪಾದೌ ಕಿಂ ಕರೋತು ಪ್ರಶಾಧಿ ಮಾಮ್ ॥ ೪ ॥**

**ದ್ವಾರಪಾಲಕನು ಒಳಗೆ ಪ್ರವೇಶಿಸಿ ಹೇಳಿದನು** - 'ಮಹಾರಾಜ ! ನಿಮ್ಮ

ಆಜ್ಞೆಯಂತೆ ವಿದುರನು ಇಲ್ಲಿಗೆ ಬಂದಿದ್ದಾನೆ. ನಿಮ್ಮ ಚರಣಾರವಿಂದಗಳನ್ನು ಸಂದರ್ಶಿಸಲು ಬಯಸುತ್ತಾನೆ. ಏನೆಂದು ತಿಳಿಸಬೇಕೆಂದು ನನಗೆ ಆಜ್ಞಾಪಿಸಿ.' ॥ ೪ ॥

ಧೃತರಾಷ್ಟ್ರ ಉವಾಚ

**ಪ್ರವೇಶಯ ಮಹಾಪ್ರಾಜ್ಞಂ ವಿದುರಂ ದೀರ್ಘದರ್ಶಿನಮ್ ।**
**ಅಹಂ ಹಿ ವಿದುರಸ್ಯಾಸ್ಯ ನಾಕಲ್ಯೋ ಜಾತು ದರ್ಶನೇ ॥ ೫ ॥**

ಧೃತರಾಷ್ಟ್ರನು ಹೇಳಿದನು - 'ಮಹಾಪ್ರಾಜ್ಞನಾದ ದೀರ್ಘದರ್ಶಿಯಾದ ವಿದುರನನ್ನು ಈಗಲೇ ಕರೆದುಕೊಂಡು ಬಾ. ವಿದುರನು ನನ್ನನ್ನು ನೋಡಲು ನಾನು ಯಾವ ವಿಧವಾದ ಕಟ್ಟುಪಾಡುಗಳನ್ನೂ ಮಾಡಿರುವುದಿಲ್ಲ.' ॥ ೫ ॥

ದ್ವಾಃಸ್ಥ ಉವಾಚ

**ಪ್ರವಿಶಾಂತಃಪುರಂ ಕ್ಷತ್ತರ್ಮಹಾರಾಜಸ್ಯ ಧೀಮತಃ ।**
**ನ ಹಿ ತೇ ದರ್ಶನೇಽಕಲ್ಯೋ ಜಾತು ರಾಜಾಬ್ರವೀದ್ಧಿ ಮಾಮ್ ॥ ೬ ॥**

ದ್ವಾರಪಾಲಕನು ವಿದುರನ ಬಳಿ ಬಂದು ಹೇಳಿದನು - 'ವಿದುರ ! ಧೀಮಂತನಾದ ಮಹಾರಾಜ ಧೃತರಾಷ್ಟ್ರನ ಅಂತಃಪುರವನ್ನು ಪ್ರವೇಶಿಸು. ರಾಜನನ್ನು ಸಂದರ್ಶಿಸಲು ನಿನಗೆ ಎಂದೂ ಯಾವ ವಿಧವಾದ ಕಟ್ಟುಪಾಡುಗಳೂ ಇಲ್ಲವೆಂದು ರಾಜನೇ ಹೇಳಿರುವನು.' ॥ ೬ ॥

ವೈಶಂಪಾಯನ ಉವಾಚ

**ತತಃ ಪ್ರವಿಶ್ಯ ವಿದುರೋ ಧೃತರಾಷ್ಟ್ರನಿವೇಶನಮ್ ।**
**ಅಬ್ರವೀತ್ ಪ್ರಾಂಜಲಿರ್ವಾಕ್ಯಂ ಚಿಂತಯಾನಂ ನರಾಧಿಪಮ್ ॥ ೭ ॥**

ವೈಶಂಪಾಯನನು ಹೇಳುತ್ತಾನೆ - 'ಅನಂತರ ವಿದುರನು ಧೃತರಾಷ್ಟ್ರನ ಅರಮನೆಯನ್ನು ಪ್ರವೇಶಿಸಿ, ಬದ್ಧಾಂಜಲಿಯಾಗಿ ನಿಂತು, ಚಿಂತಾಕುಲನಾಗಿದ್ದ ರಾಜನನ್ನು ಕುರಿತು ಹೀಗೆ ಹೇಳಿದನು.' ॥ ೭ ॥

**ವಿದುರೋಽಹಂ ಮಹಾಪ್ರಾಜ್ಞ ಸಂಪ್ರಾಪ್ತಸ್ತವ ಶಾಸನಾತ್ ।**
**ಯದಿ ಕಿಂಚನ ಕರ್ತವ್ಯಮಯಮಸ್ಮಿ ಪ್ರಶಾಧಿ ಮಾಮ್ ॥ ೮ ॥**

'ಮಹಾಪ್ರಾಜ್ಞನೇ ! ನಿನ್ನ ಆಜ್ಞಾನುಸಾರವಾಗಿ ನಾನು ವಿದುರನು ಆಗಮಿಸಿದ್ದೇನೆ. ನಾನು ಮಾಡಬೇಕಾದ ಕಾರ್ಯವೇನಾದರೂ ಇದ್ದರೆ ಆಜ್ಞಾಪಿಸಬಹುದಾಗಿದೆ. ನಾನು ಉಪಸ್ಥಿತನಿದ್ದೇನೆ.' ॥ ೮ ॥

ಧೃತರಾಷ್ಟ್ರ ಉವಾಚ

**ಸಂಜಯೋ ವಿದುರ ಪ್ರಾಜ್ಞೋ ಗರ್ಹಯಿತ್ವಾ ಚ ಮಾಂ ಗತಃ ।**
**ಅಜಾತಶತ್ರೋಃ ಶ್ವೋ ವಾಕ್ಯಂ ಸಭಾಮಧ್ಯೇ ಸ ವಕ್ಷ್ಯತಿ ॥ ೯ ॥**

**ಧೃತರಾಷ್ಟ್ರನು ಹೇಳಿದನು** – 'ವಿದುರ ! ಪ್ರಾಜ್ಞನಾದ ಸಂಜಯನು ಬಂದು, ನನ್ನನ್ನು ನಿಂದಿಸಿ ಹೋದನು. ನಾಳೆ ಸಭೆಯಲ್ಲಿ ಆತನು ಅಜಾತಶತ್ರುವಾದ ಯುಧಿಷ್ಠಿರನ ಸಂದೇಶವನ್ನು ಹೇಳಲಿರುವನು.' ॥ ೯ ॥

**ತಸ್ಯಾದ್ಯ ಕುರುವೀರಸ್ಯ ನ ವಿಜ್ಞಾತಂ ವಚೋ ಮಯಾ ।**
**ತನ್ಮೇ ದಹತಿ ಗಾತ್ರಾಣಿ ತದಕಾರ್ಷೀತ್ ಪ್ರಜಾಗರಮ್ ॥ ೧೦ ॥**

ಆ ಕುರುವೀರನಾದ ಯುಧಿಷ್ಠಿರನ ಸಂದೇಶವೇನೆಂದು ನನಗಿಂದು ತಿಳಿಯದಾಗಿದೆಯಲ್ಲ ಎಂಬ ಚಿಂತೆಯು ನನ್ನ ಶರೀರವನ್ನೇ ದಹಿಸುತ್ತಿದೆ. ನಿದ್ದೆ ಬರಲೊಲ್ಲದಾಗಿದೆ. ॥ ೧೦ ॥

**ಜಾಗ್ರತೋ ದಹ್ಯಮಾನಸ್ಯ ಶ್ರೇಯೋ ಯದನುಪಶ್ಯಸಿ ।**
**ತದ್ ಬ್ರೂಹಿ ತ್ವಂ ಹಿ ನಸ್ತಾತ ಧರ್ಮಾರ್ಥಕುಶಲೋ ಹ್ಯಸಿ ॥ ೧೧ ॥**

ವಿದುರ ! ನಾನು ಚಿಂತೆಯಿಂದ ವ್ಯಾಕುಲಗೊಂಡಿದ್ದೇನೆ. ಆದರಿಂದಾಗಿಯೇ ನಿದ್ದೆಯಿಲ್ಲದೇ ತೊಳಲಾಡುತ್ತಿದ್ದೇನೆ. ಈ ಸಂದರ್ಭದಲ್ಲಿ ಯಾವುದು ಶ್ರೇಯಸ್ಸನ್ನುಂಟುಮಾಡುವುದೋ ಅದನ್ನು ತಿಳಿಸಿಕೊಡು. ನೀನಾದರೋ ಧರ್ಮಾರ್ಥಗಳ ಸೂಕ್ಷ್ಮವನ್ನರಿತವನು. ॥ ೧೧ ॥

**ಯತಃ ಪ್ರಾಪ್ತಃ ಸಂಜಯಃ ಪಾಂಡವೇಭ್ಯೋ**
**ನ ಮೇ ಯಥಾವನ್ಮನಸಃ ಪ್ರಶಾಂತಿಃ ।**
**ಸರ್ವೇಂದ್ರಿಯಾಣ್ಯಪ್ರಕೃತಿಂ ಗತಾನಿ**
**ಕಿಂ ವಕ್ಷ್ಯತೀತ್ಯೇವ ಮೇಽದ್ಯ ಪ್ರಚಿಂತಾ ॥ ೧೨ ॥**

ಪಾಂಡವರ ಬಳಿಯಿಂದ ಸಂಜಯನು ಬಂದಾಗಿನಿಂದ ನನ್ನ ಮನಸ್ಸಿನ ನೆಮ್ಮದಿ ಮೊದಲಿನಂತೆ ಇಲ್ಲವಾಗಿದೆ. ನನ್ನ ಇಂದ್ರಿಯಗಳ ವ್ಯಾಪಾರವೆಲ್ಲವೂ ಅಸ್ತವ್ಯಸ್ತವಾಗಿದೆ. ಆತನು ನಾಳಿನ ಸಭೆಯಲ್ಲಿ ಏನು ಹೇಳಿಬಿಡುವನೋ ಎಂಬುದೇ ನನಗೆ ದೊಡ್ಡ ಚಿಂತೆಯಾಗಿದೆ. ॥ ೧೨ ॥

ವಿದುರ ಉವಾಚ

**ಅಭಿಯುಕ್ತಂ ಬಲವತಾ ದುರ್ಬಲಂ ಹೀನಸಾಧನಮ್ ।**
**ಹೃತಸ್ವಂ ಕಾಮಿನಂ ಚೋರಮಾವಿಶಂತಿ ಪ್ರಜಾಗರಾಃ ॥ ೧೩ ॥**

**ವಿದುರನು ಹೇಳಿದನು** - 'ರಾಜನೇ ! ಬಲವಂತನನ್ನು ಎದುರುಹಾಕಿಕೊಂಡವನನ್ನೂ, ಅಸಹಾಯಕನಾದ ದುರ್ಬಲನನ್ನೂ, ತನ್ನೆಲ್ಲ ಸಂಪತ್ತುಗಳನ್ನು ಕಳೆದುಕೊಂಡಿರುವವನನ್ನೂ, ಕಾಮುಕನನ್ನೂ ಹಾಗೂ ಕಳ್ಳನನ್ನೂ ನಿದ್ರಾಹೀನತೆಯು ಬಾಧಿಸುತ್ತದೆ.' ॥ ೧೩ ॥

**ಕಚ್ಚಿದೇತೈರ್ಮಹಾದೋಷೈರ್ನ ಸ್ಪೃಷ್ಟೋಽಸಿ ನರಾಧಿಪ ।**
**ಕಚ್ಚಿಚ್ಚ ಪರವಿತ್ತೇಷು ಗೃಧ್ಯನ್ನ ಪರಿತಪ್ಯಸೇ ॥ ೧೪ ॥**

'ನರಾಧಿಪ ! ಇವುಗಳಲ್ಲಿ ಒಂದಾದ ಯಾವುದೇ ಮಹಾದೋಷಗಳೊಂದಿಗೂ ನೀನು ಸಂಪರ್ಕವನ್ನು ಹೊಂದಿಲ್ಲವಷ್ಟೇ ! ಪರಸ್ವತ್ತಿನ ಮೇಲೆ ಆಸೆಪಟ್ಟು ಹಗಲಿರುಳೂ ನಿದ್ರೆಯಿಲ್ಲದೆ ಪರಿತಪಿಸುತ್ತಿಲ್ಲ ತಾನೇ ?' ॥ ೧೪ ॥

**ಧೃತರಾಷ್ಟ್ರ ಉವಾಚ**

**ಶ್ರೋತುಮಿಚ್ಛಾಮಿ ತೇ ಧರ್ಮ್ಯಂ ಪರಂ ನೈಃಶ್ರೇಯಸಂ ವಚಃ ।**
**ಅಸ್ಮಿನ್ ರಾಜರ್ಷಿವಂಶೇ ಹಿ ತ್ವಮೇಕಃ ಪ್ರಾಜ್ಞಸಮ್ಮತಃ ॥ ೧೫ ॥**

**ಧೃತರಾಷ್ಟ್ರನು ಹೇಳಿದನು** - 'ವಿದುರ ! ನಿನ್ನಿಂದ ನಾನು ಧರ್ಮಯುಕ್ತವಾದ, ಪರಮ ಶ್ರೇಯಸ್ಕರವಾದ ಮಾತುಗಳನ್ನು ಕೇಳ ಬಯಸುವೆ. ಈ ನಮ್ಮ ರಾಜವಂಶದಲ್ಲಿ ಪ್ರಾಜ್ಞರಿಗೂ ಸಮ್ಮತನಾಗಿ ಮಾನನೀಯನಾಗಿರುವವನು ನೀನೊಬ್ಬನೇ.' ॥ ೧೫ ॥

**ವಿದುರ ಉವಾಚ**

**ರಾಜಾ ಲಕ್ಷಣಸಂಪನ್ನಸ್ತ್ರೈಲೋಕ್ಯಸ್ಯಾಧಿಪೋ ಭವೇತ್ ।**
**ಪ್ರೇಷ್ಯಸ್ತೇ ಪ್ರೇಷಿತಶ್ಚೈವ ಧೃತರಾಷ್ಟ್ರ ಯುಧಿಷ್ಠಿರಃ ॥ ೧೬ ॥**

**ವಿದುರನು ಹೇಳಿದನು** - 'ಮಹಾರಾಜ ಧೃತರಾಷ್ಟ್ರ ! ಶ್ರೇಷ್ಠಲಕ್ಷಣಸಂಪನ್ನನಾದ ರಾಜಾ ಯುಧಿಷ್ಠಿರನು ಮೂರು ಲೋಕಗಳಿಗೂ ಅಧಿಪತಿಯಾಗಲು ಅರ್ಹನಾಗಿದ್ದಾನೆ. ಅವನು ನಿನ್ನ ಆಜ್ಞಾಧಾರಕನೂ ಆಗಿದ್ದನು. ಅಂತಹವನನ್ನು ನೀನು ಅರಣ್ಯಕ್ಕೆ ಕಳುಹಿಸಿದೆ.' ॥ ೧೬ ॥

**ವಿಪರೀತತರಶ್ಚ ತ್ವಂ ಭಾಗಧೇಯೇ ನ ಸಮ್ಮತಃ ।**
**ಅರ್ಚಿಷಾಂ ಪ್ರಕ್ಷಯಾಚ್ಚೈವ ಧರ್ಮಾತ್ಮಾ ಧರ್ಮಕೋವಿದಃ ॥ ೧೭ ॥**

ನೀನು ಧರ್ಮಾತ್ಮನಾಗಿದ್ದು ಧರ್ಮವನ್ನರಿತವನೂ ಆಗಿದ್ದರೂ, ಅಂಧತ್ವದ ಕಾರಣದಿಂದಾಗಿ ಅವನನ್ನರಿಯದಾದೆ. ಆದರಿಂದಾಗಿ ಆತನ ವಿಷಯದಲ್ಲಿ

ವಿಪರೀತನಾಗಿ ವರ್ತಿಸಿದೆ. ನ್ಯಾಯವಾಗಿ ಅವನಿಗೆ ನೀಡಬೇಕಿದ್ದ ರಾಜ್ಯದ ಭಾಗಕ್ಕೂ ನೀನು ಸಮ್ಮತಿಸದಾದೆ. ॥ ೧೭ ॥

**ಆನೃಶಂಸ್ಯಾದನುಕ್ರೋಶಾದ್ ಧರ್ಮಾತ್ ಸತ್ಯಾತ್ ಪರಾಕ್ರಮಾತ್ ।**
**ಗುರುತ್ವಾತ್ ತ್ವಯಿ ಸಂಪ್ರೇಕ್ಷ್ಯ ಬಹೂನ್ ಕ್ಲೇಶಾಂಸ್ತಿತಿಕ್ಷತೇ ॥ ೧೮ ॥**

ಅಕ್ರೂರತ್ವ, ದಯೆ, ಧರ್ಮ, ಸತ್ಯ, ಪರಾಕ್ರಮ, ನಿನ್ನ ಮೇಲಿನ ಪೂಜ್ಯಭಾವನೆ - ಈ ಎಲ್ಲ ಸದ್ಗುಣಗಳೂ ಧರ್ಮರಾಜನಲ್ಲಿ ಮೂರ್ತಿಮತ್ತಾಗಿರುವುದರಿಂದಲೇ ಅವನು ಎಲ್ಲ ಕಷ್ಟಗಳನ್ನೂ ಮೌನವಾಗಿ ಸಹಿಸುತ್ತಿರುವನು. ॥ ೧೮ ॥

**ದುರ್ಯೋಧನೇ ಸೌಬಲೇ ಚ ಕರ್ಣೇ ದುಃಶಾಸನೇ ತಥಾ ।**
**ಏತೇಷ್ವೈಶ್ವರ್ಯಮಾಧಾಯ ಕಥಂ ತ್ವಂ ಭೂತಿಮಿಚ್ಛಸಿ ॥ ೧೯ ॥**

ನೀನು ದುರ್ಯೋಧನ, ಶಕುನಿ, ಕರ್ಣ ಹಾಗೂ ದುಃಶಾಸನರಂತಹ ಅಯೋಗ್ಯ ವ್ಯಕ್ತಿಗಳಲ್ಲಿ ರಾಜ್ಯದ ಅಧಿಕಾರವನ್ನು ಇರಿಸಿ, ಸಂಪತ್ತು ವೃದ್ಧಿಯಾಗಲೆಂದು ಹೇಗೆ ತಾನೇ ಬಯಸುವೆ ? ॥ ೧೯ ॥

**ಆತ್ಮಜ್ಞಾನಂ ಸಮಾರಂಭಸ್ತಿತಿಕ್ಷಾ ಧರ್ಮನಿತ್ಯತಾ ।**
**ಯಮರ್ಥಾನ್ನಾಪಕರ್ಷಂತಿ ಸ ವೈ ಪಂಡಿತ ಉಚ್ಯತೇ ॥ ೨೦ ॥**

ತನ್ನ ವಾಸ್ತವಿಕ ಸ್ವರೂಪದ ಜ್ಞಾನ, ಉದ್ಯೋಗಶೀಲತೆ, ದುಃಖಗಳನ್ನೂ ಕಷ್ಟಗಳನ್ನೂ ಸಹಿಸಿಕೊಳ್ಳುವ ಶಕ್ತಿ, ಧರ್ಮದಲ್ಲಿ ಸ್ಥಿರತೆ - ಈ ಗುಣಗಳು ಯಾರನ್ನು ಚತುರ್ವಿಧಪುರುಷಾರ್ಥಗಳಿಂದ ಚ್ಯುತಿಗೊಳಿಸುವುದಿಲ್ಲವೋ ಅವನೇ ಪಂಡಿತನೆನಿಸಿಕೊಳ್ಳುತ್ತಾನೆ. ॥ ೨೦ ॥

**ನಿಷೇವತೇ ಪ್ರಶಸ್ತಾನಿ ನಿಂದಿತಾನಿ ನ ಸೇವತೇ ।**
**ಅನಾಸ್ತಿಕಃ ಶ್ರದ್ದಧಾನ ಏತತ್ ಪಂಡಿತಲಕ್ಷಣಮ್ ॥ ೨೧ ॥**

ಯಾವನು ಸತ್ಕರ್ಮಗಳನ್ನು ಮಾಡುವನೋ, ದುಷ್ಕಾರ್ಯಗಳಿಂದ ದೂರವಿರುವನೋ, ಯಾವನು ನಾಸ್ತಿಕನಲ್ಲವೋ ಮತ್ತು ಯಾವನು ಶ್ರದ್ಧಾಳುವಾಗಿರುವನೋ ಅವನೇ ಪಂಡಿತನು. ॥ ೨೧ ॥

**ಕ್ರೋಧೋ ಹರ್ಷಶ್ಚ ದರ್ಪಶ್ಚ ಹ್ರೀಃ ಸ್ತಂಭೋ ಮಾನ್ಯಮಾನಿತಾ ।**
**ಯಮರ್ಥಾನ್ನಾಪಕರ್ಷಂತಿ ಸ ವೈ ಪಂಡಿತ ಉಚ್ಯತೇ ॥ ೨೨ ॥**

ಕ್ರೋಧ, ಹರ್ಷ, ದರ್ಪ, ಲಜ್ಜೆ, ಉದ್ಧಟತನ, ತಾನೇ ದೊಡ್ಡವನೆಂಬ ಭಾವನೆ - ಇವುಗಳು ಯಾವನನ್ನು ಪುರುಷಾರ್ಥಗಳಿಂದ ಭ್ರಷ್ಟನನ್ನಾಗಿ ಮಾಡುವುದಿಲ್ಲವೋ ಅವನೇ ಪಂಡಿತನೆನಿಸಿಕೊಳ್ಳುತ್ತಾನೆ. ॥ ೨೨ ॥

**ಯಸ್ಯ ಕೃತ್ಯಂ ನ ಜಾನಂತಿ ಮಂತ್ರಂ ವಾ ಮಂತ್ರಿತಂ ಪರೇ ।**
**ಕೃತಮೇವಾಸ್ಯ ಜಾನಂತಿ ಸ ವೈ ಪಂಡಿತ ಉಚ್ಯತೇ ॥ ೨೩ ॥**

ಯಾರ ಉದ್ದೇಶಿತವಾದ ಕಾರ್ಯ, ಆ ಕಾರ್ಯಸಾಧನೆಗಾಗಿ ಆತ ಮಾಡುವ ಸಮಾಲೋಚನೆ ಮತ್ತು ಕಾರ್ಯಸಾಧನೆಗಾಗಿ ಕೈಗೊಳ್ಳುವ ವಿಧಾನ - ಇವುಗಳು ಬೇರೊಬ್ಬರಿಗೆ ತಿಳಿಯುವುದಿಲ್ಲವೋ ಮತ್ತು ಆ ಮಹಾಕಾರ್ಯವು ಮುಗಿದ ಮೇಲೆಯೇ ಅದು ತಿಳಿಯುವುದೋ ಅಂತಹ ಕಾರ್ಯವಿಚಕ್ಷಣನನ್ನು ಪಂಡಿತನೆಂದು ಹೇಳುತ್ತಾರೆ. ॥ ೨೩ ॥

**ಯಸ್ಯ ಕೃತ್ಯಂ ನ ವಿಘ್ನಂತಿ ಶೀತಮುಷ್ಣಂ ಭಯಂ ರತಿಃ ।**
**ಸಮೃದ್ಧಿರಸಮೃದ್ಧಿರ್ವಾ ಸ ವೈ ಪಂಡಿತ ಉಚ್ಯತೇ ॥ ೨೪ ॥**

ಶೀತೋಷ್ಣಗಳಾಗಲೀ, ಭಯಾನುರಾಗಗಳಾಗಲೀ, ಸಮೃದ್ಧಿ ಅಥವಾ ಕೊರತೆಗಳಾಗಲಿ ಯಾವನ ಕಾರ್ಯಕ್ಕೆ ವಿಘ್ನವನ್ನುಂಟುಮಾಡುವುದಿಲ್ಲವೋ ಅಂತಹವನನ್ನು ಪಂಡಿತನೆಂದು ಕರೆಯುತ್ತಾರೆ. ॥ ೨೪ ॥

**ಯಸ್ಯ ಸಂಸಾರಿಣೀ ಪ್ರಜ್ಞಾ ಧರ್ಮಾರ್ಥಾವನುವರ್ತತೇ ।**
**ಕಾಮಾದರ್ಥಂ ವೃಣೀತೇ ಯಃ ಸ ವೈ ಪಂಡಿತ ಉಚ್ಯತೇ ॥ ೨೫ ॥**

ವಿಷಯಾಸಕ್ತವಾದ ಯಾವನ ಬುದ್ಧಿಯು ವಿವೇಚನೆಯ ಕಾರಣದಿಂದಾಗಿ ಧರ್ಮ ಹಾಗೂ ಅರ್ಥಗಳನ್ನನುಸರಿಸಿ ಹೋಗುವುದೋ, ಮತ್ತು ಯಾವನು ಭೋಗವನ್ನು ಬದಿಗಿಟ್ಟು ಪುರುಷಾರ್ಥಗಳ ಸಾಧನೆಯಲ್ಲಿಯೇ ನಿರತನಾಗುವನೋ ಅವನು ಪಂಡಿತನೆಂದು ಕರೆಯಲ್ಪಡುತ್ತಾನೆ. ॥ ೨೫ ॥

**ಯಥಾಶಕ್ತಿ ಚಿಕೀರ್ಷಂತಿ ಯಥಾಶಕ್ತಿ ಚ ಕುರ್ವತೇ ।**
**ನ ಕಿಂಚಿದವಮನ್ಯಂತೇ ನರಾಃ ಪಂಡಿತಬುದ್ಧಯಃ ॥ ೨೬ ॥**

ವಿವೇಕಪೂರ್ಣವಾದ ಬುದ್ಧಿಯುಳ್ಳವರು ತಮ್ಮ ಸಾಮರ್ಥ್ಯಕ್ಕೆ ಅನುಗುಣವಾಗಿ ಕಾರ್ಯವನ್ನು ಕೈಗೊಳ್ಳಲು ಬಯಸುತ್ತಾರೆ. ಅದನ್ನು ವ್ಯವಸ್ಥಿತವಾಗಿ ಮಾಡುತ್ತಾರೆ ಕೂಡಾ. ಹಾಗೂ ಯಾವೊಂದನ್ನೂ ತುಚ್ಛವೆಂದು ಪರಿಗಣಿಸಿ ಅವಮಾನಿಸುವುದಿಲ್ಲ. ॥ ೨೬ ॥

**ಕ್ಷಿಪ್ರಂ ವಿಜಾನಾತಿ ಚಿರಂ ಶೃಣೋತಿ**
**ವಿಜ್ಞಾಯ ಚಾರ್ಥಂ ಭಜತೇ ನ ಕಾಮಾತ್ ।**
**ನಾಸಂಪೃಷ್ಟೋ ವ್ಯುಪಯುಂಕ್ತೇ ಪರಾರ್ಥೇ**
**ತತ್ ಪ್ರಜ್ಞಾನಂ ಪ್ರಥಮಂ ಪಂಡಿತಸ್ಯ ॥ ೨೭ ॥**

ಜ್ಞಾನಿಯಾದವನು ವಿಷಯವನ್ನು ಸಹನೆಯಿಂದ ಕೇಳುತ್ತಾನೆ. ಬಹು ಬೇಗನೆ ಗ್ರಹಿಸುತ್ತಾನೆ. ತಿಳಿದ ನಂತರ ಕರ್ತವ್ಯಬುದ್ಧಿಯಿಂದ ಪುರುಷಾರ್ಥಗಳಲ್ಲಿ ಪ್ರವೃತ್ತನಾಗುತ್ತಾನೆಯೇ ಹೊರತು ಸ್ವಾರ್ಥದ ಬಯಕೆಯಿಂದಲ್ಲ. ಬೇರೆಯವರಿಂದ ಕೇಳಲ್ಪಡದೇ, ಎಂದೂ ಅನ್ಯರ ವ್ಯವಹಾರದಲ್ಲಿ ತಲೆಹಾಕುವುದಿಲ್ಲ. ಈ ಸ್ವಭಾವಗಳೇ ಪಂಡಿತನ ಪ್ರಮುಖ ಲಕ್ಷಣಗಳಾಗಿವೆ. ॥ ೨೭ ॥

**ನಾಪ್ರಾಪ್ಯಮಭಿವಾಂಛಂತಿ ನಷ್ಟಂ ನೇಚ್ಛಂತಿ ಶೋಚಿತುಮ್ ।**
**ಆಪತ್ಸು ಚ ನ ಮುಹ್ಯಂತಿ ನರಾಃ ಪಂಡಿತಬುದ್ಧಯಃ ॥ ೨೮ ॥**

ಪಂಡಿತಬುದ್ಧಿಯನ್ನು ಹೊಂದಿರುವವರು ದುರ್ಲಭವಾದದ್ದನ್ನು ಬಯಸುವುದಿಲ್ಲ, ಕಳೆದು ಹೋದುದರ ಬಗ್ಗೆ ಶೋಕಿಸುವುದಿಲ್ಲ, ಆಪತ್ಕಾಲದಲ್ಲಿ ಧೃತಿಗೆಡುವುದೂ ಇಲ್ಲ. ॥ ೨೮ ॥

**ನಿಶ್ಚಿತ್ಯ ಯಃ ಪ್ರಕ್ರಮತೇ ನಾಂತರ್ವಸತಿ ಕರ್ಮಣಃ ।**
**ಅವಂಧ್ಯಕಾಲೋ ವಶ್ಯಾತ್ಮಾ ಸ ವೈ ಪಂಡಿತ ಉಚ್ಯತೇ ॥ ೨೯ ॥**

ಯಾರು ಸಾಧಕಬಾಧಕಗಳನ್ನು ಮೊದಲೇ ಅರಿತು ಕಾರ್ಯವನ್ನು ಆರಂಭಿಸುತ್ತಾನೆಯೋ, ಆರಂಭಿಸಿದ ಕಾರ್ಯವನ್ನು ಯಾವುದೇ ಕಾರಣದಿಂದಲೂ ಮಧ್ಯೆ ನಿಲ್ಲಿಸುವುದಿಲ್ಲವೋ, ಯಾರು ವ್ಯರ್ಥವಾಗಿ ಕಾಲಯಾಪನೆಯನ್ನು ಮಾಡುವುದಿಲ್ಲವೋ, ಯಾರು ಜಿತೇಂದ್ರಿಯನಾಗಿರುವನೋ ಅವನನ್ನು ಪಂಡಿತನೆನ್ನುತ್ತಾರೆ. ॥ ೨೯ ॥

**ಆರ್ಯಕರ್ಮಣಿ ರಜ್ಯಂತೇ ಭೂತಿಕರ್ಮಾಣಿ ಕುರ್ವತೇ ।**
**ಹಿತಂ ಚ ನಾಭ್ಯಸೂಯಂತಿ ಪಂಡಿತಾ ಭರತರ್ಷಭ ॥ ೩೦ ॥**

ಭರತಕುಲ ಭೂಷಣನೆ ! ಪಂಡಿತರಾದವರು ಶ್ರೇಷ್ಠಕಾರ್ಯಗಳಲ್ಲಿ ಅಭಿರುಚಿಯನ್ನು ಹೊಂದಿದವರಾಗಿರುತ್ತಾರೆ. ಶ್ರೇಯಸ್ಕರವಾದ ಕಾರ್ಯಗಳನ್ನು ಮಾಡುತ್ತಾರೆ. ಹಿತವಾದ ಕಾರ್ಯಗಳನ್ನು ಯಾರೇ ಮಾಡಿದರೂ (ಪ್ರಶಂಸಿಸುವರೇ ಹೊರತು) ಅಸೂಯೆಪಡರು. ॥ ೩೦ ॥

**ನ ಹೃಷ್ಯತ್ಯಾತ್ಮಸಮ್ಮಾನೇ ನಾವಮಾನೇನ ತಪ್ಯತೇ ।**
**ಗಾಂಗೋ ಹ್ರದ ಇವಾಕ್ಷೋಭ್ಯೋ ಯಃ ಸ ಪಂಡಿತ ಉಚ್ಯತೇ ॥ ೩೧ ॥**

ಗೌರವಾದರಗಳು ಪ್ರಾಪ್ತವಾದಾಗ ಆನಂದದಿಂದ ಉಬ್ಬದೆ, ಅವಮಾನ ಉಂಟಾದಾಗ ಪರಿತಾಪದಿಂದ ಕುಗ್ಗದೆ, ಗಂಗಾನದಿಯಲ್ಲಿಯ ಮಡುವಿನಂತೆ ಯಾರು ಪ್ರಶಾಂತ ಮನಸ್ಕನಾಗಿರುವನೋ ಅವನನ್ನು ಪಂಡಿತನೆಂದು ಕರೆಯುತ್ತಾರೆ. ॥ ೩೧ ॥

**ತತ್ತ್ವಜ್ಞಃ ಸರ್ವಭೂತಾನಾಂ ಯೋಗಜ್ಞಃ ಸರ್ವಕರ್ಮಣಾಮ್ ।**
**ಉಪಾಯಜ್ಞೋ ಮನುಷ್ಯಾಣಾಂ ನರಃ ಪಂಡಿತ ಉಚ್ಯತೇ ॥ ೩೨ ॥**

ಯಾರು ಸರ್ವಪ್ರಾಣಿಗಳ ಸ್ವಭಾವ ಗುಣಗಳನ್ನು ತಿಳಿದಿದ್ದಾನೆಯೋ, ಎಲ್ಲ ಕಾರ್ಯಗಳ ಆಂತರ್ಯವನ್ನು (ಕಾರ್ಯಕಾರಣಭಾವವನ್ನು) ಅರಿತಿರುವನೋ, ಮನುಷ್ಯನು ಬಯಸಿದ್ದನ್ನು ಪಡೆಯಲು ಬೇಕಾದ ಉಪಾಯವನ್ನು ತಿಳಿದಿರುವನೋ ಅವನನ್ನು ಪಂಡಿತನೆನ್ನುವರು. ॥ ೩೨ ॥

**ಪ್ರವೃತ್ತವಾಕ್ ಚಿತ್ರಕಥ ಊಹವಾನ್ ಪ್ರತಿಭಾನವಾನ್ ।**
**ಆಶು ಗ್ರಂಥಸ್ಯ ವಕ್ತಾ ಚ ಯಃ ಸ ಪಂಡಿತ ಉಚ್ಯತೇ ॥ ೩೩ ॥**

ಯಾರು ನಿರರ್ಗಳವಾಗಿ ಮಾತನಾಡಬಲ್ಲನೋ, ಮನೋರಂಜಕವಾದ ರೀತಿಯಲ್ಲಿ ವಿವರಿಸಬಲ್ಲನೋ, ಪ್ರತಿಯೊಂದರ ಕಾರ್ಯಕಾರಣಗಳ ಬಗ್ಗೆ ಸರಿಯಾಗಿ ಊಹಿಸಬಲ್ಲನೋ, ಯಾರು ಪ್ರತ್ಯುತ್ಪನ್ನಮತಿಯೋ (ಉದ್ಭವವಾಗುವ ಪ್ರತಿಯೊಂದು ಸಮಸ್ಯೆಯನ್ನೂ ಸರಿಯಾಗಿ ವಿಶ್ಲೇಷಿಸಿ ಪರಿಹರಿಸಬಲ್ಲನೋ), ಅವಿಳಂಬವಾಗಿ ಯಾರು ಗ್ರಂಥಗಳಿಂದ ಉದ್ಧರಿಸಿ ವ್ಯಾಖ್ಯಾನ ಮಾಡಲು ಸಮರ್ಥನೋ ಅವನು ಪಂಡಿತನೆಂದು ಕರೆಯಲ್ಪಡುತ್ತಾನೆ. ॥ ೩೩ ॥

**ಶ್ರುತಂ ಪ್ರಜ್ಞಾನುಗಂ ಯಸ್ಯ ಪ್ರಜ್ಞಾ ಚೈವ ಶ್ರುತಾನುಗಾ ।**
**ಅಸಂಭಿನ್ನಾರ್ಯಮರ್ಯಾದಃ ಪಂಡಿತಾಖ್ಯಾಂ ಲಭೇತ ಸಃ ॥ ೩೪ ॥**

ತಾನು ಅಧ್ಯಯನ ಮಾಡಿದ ಶಾಸ್ತ್ರವು ಯಾವನಿಗೆ ಸರ್ವದಾ ಸ್ಮರಣೆಯಲ್ಲಿರುತ್ತದೆಯೋ (ಯಾರ ವಿದ್ಯೆಯು ಬುದ್ಧಿಯನ್ನನುಸರಿಸುತ್ತದೆಯೋ), ಯಾವನ ಪ್ರಜ್ಞೆಯು ಶ್ರುತಿಪ್ರಮಾಣಗಳ ಅನುಸಾರವಾಗಿಯೇ ಇರುತ್ತದೆಯೋ (ಯಾರ ಬುದ್ಧಿಯು ವಿದ್ಯೆಯನ್ನನುಸರಿಸುತ್ತದೆಯೋ), ಯಾರು ಶಿಷ್ಟಜನರ ಉನ್ನತ ನೈತಿಕ ನಿಯಮಗಳನ್ನೆಂದೂ ಮೀರುವುದಿಲ್ಲವೋ ಅವರು ಪಂಡಿತರೆನಿಸಿಕೊಳ್ಳುತ್ತಾರೆ. ॥ ೩೪ ॥

**ಅಶ್ರುತಶ್ಚ ಸಮುನ್ನದ್ಧೋ ದರಿದ್ರಶ್ಚ ಮಹಾಮನಾಃ ।**
**ಅರ್ಥಾಂಶ್ಚಾಕರ್ಮಣಾ ಪ್ರೇಪ್ಸುರ್ಮೂಢ ಇತ್ಯುಚ್ಯತೇ ಬುಧೈಃ ॥ ೩೫ ॥**

ಯಾವನು ಶ್ರುತಿಶಾಸ್ತ್ರಗಳ ಅಧ್ಯಯನ ಮಾಡದೆಯೇ ಗರ್ವಿಷ್ಠನಾಗಿರುವನೋ, ಯಾವನು ದರಿದ್ರನಾಗಿದ್ದರೂ ಮಹತ್ತರವಾದ ಆಕಾಂಕ್ಷೆಗಳನ್ನಿಟ್ಟುಕೊಂಡಿರುವನೋ ಮತ್ತು ಯಾವನು ಕೆಲಸಮಾಡದೆಯೇ ಅರ್ಥವನ್ನು (ಫಲವನ್ನು) ಪಡೆಯಲು ಇಚ್ಛಿಸುವನೋ (ಯಾರು ತನ್ನ ಗುರಿಯನ್ನು (ಸಂಪತ್ತನ್ನು) ಸಾಧಿಸಲು ಅನೈತಿಕ ಮಾರ್ಗವನ್ನು ಹಿಡಿಯುವನೋ) ಅವನು ಪಂಡಿತರಿಂದ ಮೂರ್ಖನೆಂದು ಕರೆಯಲ್ಪಡುತ್ತಾನೆ ॥ ೩೫ ॥

**ಸ್ವಮರ್ಥಂ ಯಃ ಪರಿತ್ಯಜ್ಯ ಪರಾರ್ಥಮನುತಿಷ್ಠತಿ ।**
**ಮಿಥ್ಯಾ ಚರತಿ ಮಿತ್ರಾರ್ಥೇ ಯಶ್ಚ ಮೂಢಃ ಸ ಉಚ್ಯತೇ ॥ ೩೬ ॥**

ಯಾರು ತನ್ನ ಕರ್ತವ್ಯವನ್ನು ನಿರ್ಲಕ್ಷಿಸಿ, ಬೇರೆಯವರ ವ್ಯವಹಾರವನ್ನು ಅವಲಂಬಿಸಿರುತ್ತಾನೆಯೋ, ಯಾರು ಸ್ನೇಹಿತನಿಗೆ ದ್ರೋಹ ಬಗೆಯುತ್ತಾನೆಯೋ ಅವನನ್ನು ಮೂರ್ಖನೆಂದು ಕರೆಯುತ್ತಾರೆ. ॥ ೩೬ ॥

**ಅಕಾಮಾನ್ ಕಾಮಯತಿ ಯಃ ಕಾಮಯಾನಾನ್ ಪರಿತ್ಯಜೇತ್ ।**
**ಬಲವಂತಂ ಚ ಯೋ ದ್ವೇಷ್ಟಿ ತಮಾಹುರ್ಮೂಢಚೇತಸಮ್ ॥ ೩೭ ॥**

ಯಾವನು ಅಪೇಕ್ಷಿಸಬಾರದ್ದನ್ನು ಅಪೇಕ್ಷಿಸುವನೋ, ಅಪೇಕ್ಷಿಸಿ ಪಡೆಯಲು ಯೋಗ್ಯವಾದದ್ದನ್ನು ಪರಿತ್ಯಜಿಸುವನೋ ಹಾಗೂ ತನಗಿಂತ ಬಲಿಷ್ಠನಾದವನನ್ನು ದ್ವೇಷಿಸುವನೋ ಅಂತಹವನನ್ನು 'ಮೂರ್ಖ ವಿಚಾರಗಳುಳ್ಳ ಮನುಷ್ಯ' ಎಂದೆನ್ನುವರು. ॥ ೩೭ ॥

**ಅಮಿತ್ರಂ ಕುರುತೇ ಮಿತ್ರಂ ಮಿತ್ರಂ ದ್ವೇಷ್ಟಿ ಹಿನಸ್ತಿ ಚ ।**
**ಕರ್ಮ ಚಾರಭತೇ ದುಷ್ಟಂ ತಮಾಹುರ್ಮೂಢಚೇತಸಮ್ ॥ ೩೮ ॥**

ಯಾವನು ಶತ್ರುವಿನೊಡನೆ ಮೈತ್ರಿಯನ್ನು ಬೆಳೆಸಿಕೊಳ್ಳುವನೋ, ಮಿತ್ರನನ್ನು (ಹಿತೈಷಿಯನ್ನು) ಯಾವನು ದ್ವೇಷಿಸಿ ಹಿಂಸಿಸುವನೋ ಮತ್ತು ಕೆಟ್ಟ ಕೆಲಸವನ್ನು ಯಾವನು ಆರಂಭಿಸುವನೋ ಅವನನ್ನು ಮೂರ್ಖಮನಸ್ಸುಳ್ಳವನೆಂದು ಕರೆಯುತ್ತಾರೆ. ॥ ೩೮ ॥

**ಸಂಸಾರಯತಿ ಕೃತ್ಯಾನಿ ಸರ್ವತ್ರ ವಿಚಿಕಿತ್ಸತೇ ।**
**ಚಿರಂ ಕರೋತಿ ಕ್ಷಿಪ್ರಾರ್ಥೇ ಸ ಮೂಢೋ ಭರತರ್ಷಭ ॥ ೩೯ ॥**

ಹೇ ಭರತರ್ಷಭ ! ಯಾರು ತಾನು ಮಾಡಲಿರುವ ಕಾರ್ಯಗಳ ಬಗ್ಗೆ ವ್ಯರ್ಥವಾಗಿ ಪ್ರಚುರಪಡಿಸುತ್ತಾ ಮಾಡಲು ಹಿಂಜರಿಯುತ್ತಾ ಇರುವನೋ, ಯಾರು ಎಲ್ಲದರಲ್ಲಿಯೂ ಸಂದೇಹವುಳ್ಳವನಾಗಿರುವನೋ, ಶೀಘ್ರವಾಗಿ ಮಾಡಬೇಕಾದ ಕಾರ್ಯಗಳನ್ನು ಯಾರು ವಿಳಂಬವಾಗಿ ಮಾಡುವನೋ ಅಂತಹವನನ್ನು ಮೂರ್ಖನೆನ್ನುತ್ತಾರೆ. ॥ ೩೯ ॥

**ಶ್ರಾದ್ಧಂ ಪಿತೃಭ್ಯೋ ನ ದದಾತಿ ದೈವತಾನಿ ನ ಚಾರ್ಚತಿ।**
**ಸುಹೃನ್ಮಿತ್ರಂ ನ ಲಭತೇ ತಮಾಹುರ್ಮೂಢಚೇತಸಮ್ ॥ ೪೦ ॥**

ಪಿತೃಗಳಿಗೆ ಯಾರು ಶ್ರಾದ್ಧಮಾಡುವುದಿಲ್ಲವೋ, ದೇವತೆಗಳನ್ನು ಯಾರು ಪೂಜಿಸುವುದಿಲ್ಲವೋ ಮತ್ತು ಒಳ್ಳೆಯ ಮನಸ್ಸಿನ ಮಿತ್ರರನ್ನು ಯಾರು ಪಡೆದಿರುವುದಿಲ್ಲವೋ ಅಂತಹವನನ್ನು ಮೂಢನೆಂದು ಕರೆಯುತ್ತಾರೆ. ॥ ೪೦ ॥

**ಅನಾಹೂತಃ ಪ್ರವಿಶತಿ ಅಪೃಷ್ಟೋ ಬಹು ಭಾಷತೇ।**
**ಅವಿಶ್ವಸ್ತೇ ವಿಶ್ವಸಿತಿ ಮೂಢಚೇತಾ ನರಾಧಮಃ ॥ ೪೧ ॥**

ಆಹ್ವಾನವಿಲ್ಲದೆಡೆ ಯಾರು ಪ್ರವೇಶಿಸುವನೋ, ಕೇಳದಿದ್ದರೂ ಯಾರು ತುಂಬ ಮಾತನಾಡುವನೋ, ವಿಶ್ವಾಸಕ್ಕೆ ಅನರ್ಹರಾದವನಲ್ಲಿ ಯಾವನು ವಿಶ್ವಾಸವಿಡುವನೋ ಅವನು ಮನುಷ್ಯರಲ್ಲಿ ಅಧಮನಾದ ಮೂಢನಾಗಿದ್ದಾನೆ. ॥ ೪೧ ॥

**ಪರಂ ಕ್ಷಿಪತಿ ದೋಷೇಣ ವರ್ತಮಾನಃ ಸ್ವಯಂ ತಥಾ।**
**ಯಶ್ಚ ಕ್ರುಧ್ಯತ್ಯನೀಶಾನಃ ಸ ಚ ಮೂಢತಮೋ ನರಃ ॥ ೪೨ ॥**

ಯಾವನು ತಾನೇ ದೋಷಭಾಗಿಯಾಗಿದ್ದು ಇತರರಲ್ಲಿ ಕಾಣುವ ಅದೇ ದೋಷವನ್ನು ಎತ್ತಿ ತೋರಿಸಿ ಅವರನ್ನು ದೂಷಿಸುವನೋ, ತಾನು ಅಸಮರ್ಥನಾಗಿದ್ದೂ ಸಹ ವ್ಯರ್ಥವಾಗಿ ಕೋಪಗೊಳ್ಳುವನೋ ಅಂತಹವನನ್ನು ಮೂಢನೆಂದು ಕರೆಯುತ್ತಾರೆ. ॥ ೪೨ ॥

**ಆತ್ಮನೋ ಬಲಮಜ್ಞಾಯ ಧರ್ಮಾರ್ಥಪರಿವರ್ಜಿತಮ್।**
**ಅಲಭ್ಯಮಿಚ್ಛನ್ನೈಷ್ಕರ್ಮ್ಯಾನ್ಮೂಢಬುದ್ಧಿರಿಹೋಚ್ಯತೇ ॥ ೪೩ ॥**

ತನ್ನ ಸಾಮರ್ಥ್ಯವೆಷ್ಟಿದೆಯೆಂಬುದನ್ನು ತಿಳಿಯದೇ ಧರ್ಮ ಮತ್ತು ಅರ್ಥ – ಈ ಎರಡರಿಂದಲೂ ವಿವರ್ಜಿತವಾದ (ಧರ್ಮಸಾಧನೆಗಾಗಲೀ ಅರ್ಥಸಂಪಾದನೆಗಾಗಲೀ ಉಪಕಾರಿಯಾಗಿರದ) ಅಲಭ್ಯವಾದ ವಸ್ತುವೊಂದನ್ನು ಪ್ರಯತ್ನ ಮಾಡದೆಯೇ ಇಚ್ಛಿಸತಕ್ಕವನು ಮೂಢನೆನಿಸಿಕೊಳ್ಳುತ್ತಾನೆ. ॥ ೪೩ ॥

**ಅಶಿಷ್ಯಂ ಶಾಸ್ತಿ ಯೋ ರಾಜನ್ ಯಶ್ಚ ಶೂನ್ಯಮುಪಾಸತೇ*।**
**ಕದರ್ಯಂ ಭಜತೇ ಯಶ್ಚ ತಮಾಹುರ್ಮೂಢಚೇತಸಮ್ ॥ ೪೪ ॥**

ರಾಜನ್ ! ಯಾವನು ಅನಧಿಕಾರಿಯಾದವನಿಗೆ ಉಪದೇಶವನ್ನು ನೀಡುವನೋ,

---

* ಇಲ್ಲಿ 'ಉಪಾಸ್ತೇ' ಎಂದಿರಬೇಕಾದಲ್ಲಿ 'ಉಪಾಸತೇ' ಎಂಬ ಬಹುವಚನ ಪ್ರಯೋಗವಿದೆ. ಇದನ್ನು 'ಆರ್ಷಪ್ರಯೋಗ'ವೆಂದು ತಿಳಿಯತಕ್ಕದ್ದು.

ಯಾವನು ಶೂನ್ಯೋಪಾಸನೆ ಮಾಡುವನೋ (ಇಲ್ಲದಿರುವುದನ್ನೇ ಉಪಾಸನೆ ಮಾಡಲು ಹೋಗುವನೋ) ಮತ್ತು ಕಡುಲೋಭಿಯನ್ನು ಯಾವನು ಸೇವಿಸುವನೋ ಅವನನ್ನು ಮೂಢನೆಂದು ಹೇಳುತ್ತಾರೆ. ॥ ೪೪ ॥

**ಅರ್ಥಂ ಮಹಾಂತಮಾಸಾದ್ಯ ವಿದ್ಯಾಮೈಶ್ವರ್ಯಮೇವ ಚ ।**
**ವಿಚರತ್ಯಸಮುನ್ನದ್ಧೋ ಯಃ ಸ ಪಂಡಿತ ಉಚ್ಯತೇ ॥ ೪೫ ॥**

ಯಾರು ಮಹತ್ತಾದ ಧನ, ವಿದ್ಯೆ ಹಾಗೂ ಐಶ್ವರ್ಯಗಳನ್ನು ಹೊಂದಿಯೂ ಸಹ ಅಹಂಕಾರರಹಿತನಾಗಿ ಇರುವನೋ ಅಂತಹವನನ್ನು ಪಂಡಿತನೆಂದು ಕರೆಯುತ್ತಾರೆ. ॥ ೪೫ ॥

**ಏಕಃ ಸಂಪನ್ನಮಶ್ನಾತಿ ವಸ್ತೇ ವಾಸಶ್ಚ ಶೋಭನಮ್ ।**
**ಯೋಽಸಂವಿಭಜ್ಯ ಭೃತ್ಯೇಭ್ಯಃ ಕೋ ನೃಶಂಸತರಸ್ತತಃ ॥ ೪೬ ॥**

ಯಾವನು ತನ್ನ ಬಂಧು ಮಿತ್ರರಿಗೂ, ಸೇವಕರಿಗೂ ಹಂಚಿಕೊಡದೇ ತಾನೊಬ್ಬನೇ ಕುಳಿತು ಮೃಷ್ಟಾನ್ನವನ್ನು ಭುಂಜಿಸುವನೋ, ಉತ್ತಮೋತ್ತಮವಾದ ವಸ್ತ್ರಗಳನ್ನು ತಾನೊಬ್ಬನೇ ಧರಿಸುವನೋ ಅಂತಹವನಿಗಿಂತಲೂ ಕ್ರೂರಿಯಾದವನು ಯಾವನಿದ್ದಾನೆ ? ॥ ೪೬ ॥

**ಏಕಃ ಪಾಪಾನಿ ಕುರುತೇ ಫಲಂ ಭುಂಕ್ತೇ ಮಹಾಜನಃ ।**
**ಭೋಕ್ತಾರೋ ವಿಪ್ರಮುಚ್ಯಂತೇ ಕರ್ತಾ ದೋಷೇಣ ಲಿಪ್ಯತೇ ॥ ೪೭ ॥**

ಒಬ್ಬನು ಪಾಪವನ್ನು ಮಾಡುತ್ತಾನೆ. ಆದರೆ ಅದರ ಫಲವನ್ನು ಬಹುಜನರು ಅನುಭವಿಸುತ್ತಾರೆ. ಫಲವನ್ನು ಅನುಭವಿಸಿದವರು ಬಿಡಲ್ಪಡುತ್ತಾರೆ. ಆದರೆ ಪಾಪವನ್ನು ಮಾಡಿದವನಿಗೆ ಆ ಪಾಪದೋಷವು ಅಂಟಿಕೊಳ್ಳುತ್ತದೆ. ॥ ೪೭ ॥

**ಏಕಂ ಹನ್ಯಾನ್ನ ವಾ ಹನ್ಯಾದಿಷುರ್ಮುಕ್ತೋ ಧನುಷ್ಮತಾ ।**
**ಬುದ್ಧಿರ್ಬುದ್ಧಿಮತೋತ್ಸೃಷ್ಟಾ ಹನ್ಯಾದ್ ರಾಷ್ಟ್ರಂ ಸರಾಜಕಮ್ ॥ ೪೮ ॥**

ಧನುರ್ವಿದ್ಯಾಪಾರಂಗತನಾದವನಿಂದ ಬಿಡಲ್ಪಟ್ಟ ಬಾಣವು ಯಾವೊಬ್ಬನನ್ನು ಕೊಲ್ಲಬಹುದು ಅಥವಾ ಕೊಲ್ಲದೆಯೂ ಇರಬಹುದು. ಆದರೆ ಬುದ್ಧಿಶಾಲಿಯಿಂದ ಪ್ರಯೋಗಿಸಲ್ಪಟ್ಟ ಬುದ್ಧಿಚಾತುರ್ಯವೆಂಬ ಬಾಣವು (ದುರುದ್ದೇಶದಿಂದ ಕೂಡಿದುದು) ರಾಜನಿಂದೊಡಗೂಡಿದ ರಾಷ್ಟ್ರವನ್ನೇ ಧ್ವಂಸ ಮಾಡಬಲ್ಲುದು. ॥ ೪೮ ॥

**ಏಕಯಾ ದ್ವೇ ವಿನಿಶ್ಚಿತ್ಯ ತ್ರೀಂಶ್ಚತುರ್ಭಿರ್ವಶೇ ಕುರು ।**
**ಪಂಚ ಜಿತ್ವಾ ವಿದಿತ್ವಾ ಷಟ್ ಸಪ್ತ ಹಿತ್ವಾ ಸುಖೀ ಭವ ॥ ೪೯ ॥**

ಒಂದರಿಂದ(ಬುದ್ಧಿ) ಎರಡನ್ನು(ಕಾರ್ಯ, ಅಕಾರ್ಯ) ನಿಶ್ಚಯಿಸಬೇಕು. ಮೂ
(ಶತ್ರು, ಮಿತ್ರ ಹಾಗೂ ಉದಾಸೀನ) ನಾಲ್ಕರಿಂದ (ಸಾಮ, ದಾನ, ಭೇದ, ದಂ
ವಶಮಾಡಿಕೋ. ಐದನ್ನು (ಪಂಚೇಂದ್ರಿಯಗಳು) ಜಯಿಸಿ ಆರನ್ನು (ಸಂಧಿ, ವಿಗ್ರ
ಯಾನ, ಆಸನ, ದ್ವೈಧೀಭಾವ ಮತ್ತು ಸಮಾಶ್ರಯ) ತಿಳಿ. ಏಳನ್ನು (ಸ್ತ್ರೀ, ಜೂ
ಬೇಟೆ, ಮದ್ಯ, ಕಠೋರವಚನ, ಕಠಿಣ ಶಿಕ್ಷೆ, ಅನ್ಯಾಯದಿಂದ ಧನಾರ್ಜನೆ) ಬಿ
ಸುಖಿಯಾಗಿರು. ॥ ೪೯ ॥

**ಏಕಂ ವಿಷರಸೋ ಹಂತಿ ಶಸ್ತ್ರೇಣೈಕಶ್ಚ ವಧ್ಯತೇ ।**
**ಸರಾಷ್ಟ್ರಂ ಸಪ್ರಜಂ ಹಂತಿ ರಾಜಾನಂ ಮಂತ್ರವಿಪ್ಲವಃ ॥ ೫೦ ॥**

ವಿಷವು, ಸೇವಿಸಿದವನನ್ನು ಮಾತ್ರವೇ ಕೊಲ್ಲುತ್ತದೆ. ಶಸ್ತ್ರದಿಂದ ಒಬ್ಬನು ಮಾತ್ರ ಕೊಲ್ಲಲ್ಪಡುತ್ತಾನೆ ಆದರೆ ರಾಜರಹಸ್ಯವು ಬಯಲಾದಲ್ಲಿ ಅದು ರಾಜನನ್ನೂ, ಪ್ರಜೆಗಳ ಮತ್ತು ರಾಜ್ಯವನ್ನೂ ಧ್ವಂಸ ಮಾಡುತ್ತದೆ. ॥ ೫೦ ॥

**ಏಕಃ ಸ್ವಾದು ನ ಭುಂಜೀತ ಏಕಶ್ಚಾರ್ಥಾನ್ನ ಚಿಂತಯೇತ್ ।**
**ಏಕೋ ನ ಗಚ್ಛೇದಧ್ವಾನಂ ನೈಕಃ ಸುಪ್ತೇಷು ಜಾಗೃಯಾತ್ ॥ ೫೧ ॥**

ಮೃಷ್ಟಾನ್ನವನ್ನು ಒಬ್ಬನೇ ಊಟಮಾಡಬಾರದು. ಒಬ್ಬನೇ ಕುಳಿತು (ರಾಜ್ಯದ) ಆರ್ಥಿ ಪರಿಸ್ಥಿತಿಯ ವಿಷಯವಾಗಿ ಆಲೋಚಿಸಬಾರದು ಮತ್ತು ಮುಖ್ಯವಿಷಯಗಳ ನಿರ್ಣಯಿಸಲೂ ಹೋಗಬಾರದು. ಒಬ್ಬನೇ ಪ್ರಯಾಣವನ್ನು ಮಾಡಬಾರದು. ಎಲ್ಲರ ಮಲಗಿ ನಿದ್ರಿಸುತ್ತಿರುವಾಗ ಒಬ್ಬನೇ ಎಚ್ಚರಗೊಂಡಿರಬಾರದು. ॥ ೫೧ ॥

**ಏಕಮೇವಾದ್ವಿತೀಯಂ ತದ್ ಯದ್ ರಾಜನ್ನಾವಬುಧ್ಯಸೇ ।**
**ಸತ್ಯಂ ಸ್ವರ್ಗಸ್ಯ ಸೋಪಾನಂ ಪಾರಾವಾರಸ್ಯ ನೌರಿವ ॥ ೫೨ ॥**

ಸಮುದ್ರವನ್ನು ದಾಟಲು ನೌಕೆಯು ಏಕಮಾತ್ರವಾದ ಸಾಧನವಾಗಿರುವಂ ಸ್ವರ್ಗಪ್ರಾಪ್ತಿಗೆ ಸತ್ಯವೇ (ಸತ್ಯನಿಷ್ಠೆಯೇ) ಏಕಮೇವ ಸೋಪಾನವಾಗಿದೆ. ಎರಡನೆಂ ಮಾರ್ಗವೇ ಇಲ್ಲ, ಆದರೆ ಮಹಾರಾಜ ! ನೀನಿದನ್ನು ಅರಿಯುತ್ತಿಲ್ಲ. ॥ ೫೨ ॥

**ಏಕಃ ಕ್ಷಮಾವತಾಂ ದೋಷೋ ದ್ವಿತೀಯೋ ನೋಪಪದ್ಯತೇ ।**
**ಯದೇನಂ ಕ್ಷಮಯಾ ಯುಕ್ತಮಶಕ್ತಂ ಮನ್ಯತೇ ಜನಃ ॥ ೫೩ ॥**

ಕ್ಷಮಾವಂತರಾಗಿರುವವರ ಮೇಲೆ ಒಂದೇ ಒಂದು ದೋಷ ಆರೋಪಣೆಯಿದೆ. ಎರಡನೆಯ ದೋಷವನ್ನೆಂದೂ ಆರೋಪಿಸಲಾಗದು. ಅವನಲ್ಲಿರು ದೋಷವೆಂದರೆ ಕ್ಷಮಾಯುಕ್ತನಾದ ಅವನನ್ನು ಜನರು 'ಅಶಕ್ತ' 'ದುರ್ಬ ಎಂದುಕೊಳ್ಳುತ್ತಾರೆ. ॥ ೫೩ ॥

**ಸೋಽಸ್ಯ ದೋಷೋ ನ ಮಂತವ್ಯಃ ಕ್ಷಮಾ ಹಿ ಪರಮಂ ಬಲಮ್ ।**
**ಕ್ಷಮಾ ಗುಣೋ ಹ್ಯಶಕ್ತಾನಾಂ ಶಕ್ತಾನಾಂ ಭೂಷಣಂ ಕ್ಷಮಾ ॥ ೫೪ ॥**

ಆದರೆ ಅದನ್ನು ಕ್ಷಮಾವಂತನ ದೋಷವೆಂದು ಪರಿಗಣಿಸಬಾರದು. ಏಕೆಂದರೆ ಕ್ಷಮೆಯೆಂಬುದು ದೊಡ್ಡ ಬಲವೇ ಸರಿ. ಅಶಕ್ತರಾದವರಿಗೆ ಕ್ಷಮೆಯು ಗುಣವಾಗಿಯೂ, ಶಕ್ತರಾದವರಿಗೆ ಭೂಷಣಪ್ರಾಯವಾಗಿಯೂ ಇರುತ್ತದೆ. ॥ ೫೪ ॥

**ಕ್ಷಮಾ ವಶೀಕೃತಿರ್ಲೋಕೇ ಕ್ಷಮಯಾ ಕಿಂ ನ ಸಾಧ್ಯತೇ ।**
**ಶಾಂತಿಖಡ್ಗಃ ಕರೇ ಯಸ್ಯ ಕಿಂ ಕರಿಷ್ಯತಿ ದುರ್ಜನಃ ॥ ೫೫ ॥**

ಕ್ಷಮಾಗುಣವು ವಶೀಕರಣರೂಪವಾಗಿರುವುದು. ಕ್ಷಮಾಗುಣದಿಂದ ಸಾಧಿಸಲಾಗದುದು ಯಾವುದು ? ಯಾವನ ಕೈಯಲ್ಲಿ 'ಶಾಂತಿ'ಯೆಂಬ ಖಡ್ಗವಿರುವುದೋ ಅಂತಹವನನ್ನು ದುರ್ಜನನು ಏನು ತಾನೇ ಮಾಡಿಯಾನು ? ॥ ೫೫ ॥

**ಅತೃಣೇ ಪತಿತೋ ವಹ್ನಿಃ ಸ್ವಯಮೇವೋಪಶಾಮ್ಯತಿ ।**
**ಅಕ್ಷಮಾವಾನ್ ಪರಂ ದೋಷೈರಾತ್ಮಾನಂ ಚೈವ ಯೋಜಯೇತ್ ॥ ೫೬ ॥**

ಹುಲ್ಲಿಲ್ಲದ ಸ್ಥಳದ ಮೇಲೆ ಬಿದ್ದ ಬೆಂಕಿಯು ತಾನಾಗಿಯೇ ಆರಿಹೋಗುತ್ತದೆ. ಕ್ಷಮಾವಂತನಲ್ಲದವನು ತನ್ನನ್ನೂ ಮತ್ತು ಇತರರನ್ನೂ ದೋಷಭಾಗಿಗಳನ್ನಾಗಿ ಮಾಡುತ್ತಾನೆ ॥ ೫೬ ॥

**ಏಕೋ ಧರ್ಮಃ ಪರಂ ಶ್ರೇಯಃ ಕ್ಷಮೈಕಾ ಶಾಂತಿರುತ್ತಮಾ ।**
**ವಿದ್ಯೈಕಾ ಪರಮಾ ತೃಪ್ತಿರಹಿಂಸೈಕಾ ಸುಖಾವಹಾ ॥ ೫೭ ॥**

ಧರ್ಮವೊಂದೇ ಪರಮಶ್ರೇಯಸ್ಸಿಗೆ ಕಾರಣವಾದುದು. ಕ್ಷಮಾಗುಣವೊಂದೇ ಶಾಂತಿಸ್ಥಾಪನೆಗೆ ಏಕಮಾತ್ರವಾದ ಉಪಾಯವಾಗಿದೆ. ವಿದ್ಯೆಯೊಂದೇ ಶ್ರೇಷ್ಠವಾದ ಮಾನಸಿಕ ತೃಪ್ತಿಯನ್ನು ಉಂಟು ಮಾಡಬಲ್ಲುದು. ಅಂಹಿಸೆಯೊಂದು ಮಾತ್ರವೇ ಸುಖವನ್ನು ತಂದುಕೊಡುವಂತಹುದು. ॥ ೫೭ ॥

**ದ್ವಾವಿಮೌ ಗ್ರಸತೇ ಭೂಮಿಃ ಸರ್ಪೋ ಬಿಲಶಯಾನಿವ ।**
**ರಾಜಾನಂ ಚಾವಿರೋದ್ಧಾರಂ ಬ್ರಾಹ್ಮಣಂ ಚಾಪ್ರವಾಸಿನಮ್ ॥ ೫೮ ॥**

ಬಿಲದಲ್ಲಿರುವ ಪ್ರಾಣಿಗಳನ್ನು ಸರ್ಪವು ನುಂಗಿಹಾಕಿಬಿಡುವಂತೆ, ಶತ್ರುಗಳನ್ನೆದುರಿಸದ ರಾಜನನ್ನೂ ಹಾಗೂ ದೇಶಾಟನೆಯನ್ನು ಕೈಗೊಳ್ಳದ ಬ್ರಾಹ್ಮಣನನ್ನೂ ಭೂಮಿಯು ನುಂಗಿಬಿಡುತ್ತದೆ. ॥ ೫೮ ॥

**ದ್ವೇ ಕರ್ಮಣೀ ನರಃ ಕುರ್ವನ್ನಸ್ಮಿಂಲ್ಲೋಕೇ ವಿರೋಚತೇ ।**
**ಅಬ್ರುವನ್ ಪುರುಷಂ ಕಿಂಚಿದಸತೋಽನರ್ಚಯಂಸ್ತಥಾ ॥ ೫೯ ॥**

ಎಂದೂ ಕಠಿಣವಾದ ಮಾತುಗಳನ್ನಾಡದಿರುವುದು ಹಾಗೂ ದುಷ್ಟ ವ್ಯಕ್ತಿಗಳನ್ನು ಆದರಿಸದಿರುವುದು – ಈ ಎರಡು ಕೆಲಸಗಳನ್ನು ಮಾಡುವ ವ್ಯಕ್ತಿಯು ಈ ಲೋಕದಲ್ಲಿ ವಿಶೇಷ ಖ್ಯಾತಿಯನ್ನು ಹೊಂದುತ್ತಾನೆ. ॥ ೫೯ ॥

**ದ್ವಾವಿಮೌ ಪುರುಷವ್ಯಾಘ್ರ ಪರಪ್ರತ್ಯಯಕಾರಿಣೌ ।**
**ಸ್ತ್ರಿಯಃ ಕಾಮಿತಕಾಮಿನ್ಯೋ ಲೋಕಃ ಪೂಜಿತಪೂಜಕಃ ॥ ೬೦ ॥**

ಪುರುಷವ್ಯಾಘ್ರನೆ ! ಬೇರೆ ಸ್ತ್ರೀಯರಿಂದ ಕಾಮಿಸಲ್ಪಟ್ಟದ್ದನ್ನು ಅಪೇಕ್ಷಿಸುವ ಸ್ತ್ರೀಯರು ಹಾಗೂ ಬೇರೆಯವರಿಂದ ಆದರಿಸಲ್ಪಟ್ಟವರನ್ನು ಆದರಿಸುವ ಪುರುಷ – ಇವರಿಬ್ಬರು ಬೇರೆಯವರ ನಂಬಿಕೆಗನುಸಾರವಾಗಿ ನಡೆಯುವವರು. ॥ ೬೦ ॥

**ದ್ವಾವಿಮೌ ಕಂಟಕೌ ತೀಕ್ಷ್ಣೌ ಶರೀರಪರಿಶೋಷಿಣೌ ।**
**ಯಶ್ಚಾಧನಃ ಕಾಮಯತೇ ಯಶ್ಚ ಕುಪ್ಯತ್ಯನೀಶ್ವರಃ ॥ ೬೧ ॥**

ಯಾರು ದರಿದ್ರನಾಗಿದ್ದರೂ ಮಹದಾಸೆಗಳನ್ನು ಹೊಂದಿರುತ್ತಾನೆಯೋ ಹಾಗೂ ಯಾರು ಅಸಮರ್ಥನಾಗಿದ್ದರೂ ಕೋಪಗೊಂಡಿರುತ್ತಾನೆಯೋ – ಈ ಇಬ್ಬರೂ ಶರೀರವನ್ನು ಪರಿತಪಿಸುವಂತೆ ಮಾಡುವ ಎರಡು ತೀಕ್ಷ್ಣವಾದ ಮುಳ್ಳುಗಳಿದ್ದಂತೆ. ॥ ೬೧ ॥

**ದ್ವಾವೇವ ನ ವಿರಾಜೇತೇ ವಿಪರೀತೇನ ಕರ್ಮಣಾ ।**
**ಗೃಹಸ್ಥಶ್ಚ ನಿರಾರಂಭಃ ಕಾರ್ಯವಾಂಶ್ಚೈವ ಭಿಕ್ಷುಕಃ ॥ ೬೨ ॥**

ಕರ್ಮ ಮಾಡದ ಗೃಹಸ್ಥ ಹಾಗೂ ಲೌಕಿಕದಲ್ಲಿಯೇ ಪ್ರವೃತ್ತನಾಗಿರುವ ಸಂನ್ಯಾಸಿ – ಈ ಇಬ್ಬರೂ ಪ್ರಪಂಚದಲ್ಲಿ ತಮಗೆ ಸಲ್ಲದ ಕಾರ್ಯಮಾಡುತ್ತಾರಾದ್ದರಿಂದ ಶೋಭಿಸುವುದಿಲ್ಲ. ॥ ೬೨ ॥

**ದ್ವಾವಿಮೌ ಪುರುಷೌ ರಾಜನ್ ಸ್ವರ್ಗಸ್ಯೋಪರಿ ತಿಷ್ಠತಃ ।**
**ಪ್ರಭುಶ್ಚ ಕ್ಷಮಯಾ ಯುಕ್ತೋ ದರಿದ್ರಶ್ಚ ಪ್ರದಾನವಾನ್ ॥ ೬೩ ॥**

ಮಹಾರಾಜ ! ಕ್ಷಮಾಶೀಲನಾದ ಬಲಿಷ್ಠರಾಜ ಹಾಗೂ ದಾನಶೀಲನಾದ ದರಿದ್ರ – ಇವರಿಬ್ಬರೂ ಸ್ವರ್ಗಕ್ಕಿಂತಲೂ ಮೇಲಿನ ಸ್ಥಾನದಲ್ಲಿ ನಿಲ್ಲುತ್ತಾರೆ. ॥ ೬೩ ॥

**ನ್ಯಾಯಾಗತಸ್ಯ ದ್ರವ್ಯಸ್ಯ ಬೋದ್ಧವ್ಯೌ ದ್ವಾವತಿಕ್ರಮೌ ।**
**ಅಪಾತ್ರೇ ಪ್ರತಿಪತ್ತಿಶ್ಚ ಪಾತ್ರೇ ಚಾಪ್ರತಿಪಾದನಮ್ ॥ ೬೪ ॥**

ಅಪಾತ್ರನಿಗೆ ದಾನ ಹಾಗೂ ಸತ್ಪಾತ್ರರಿಗೆ ಕೊಡದಿರುವುದು - ಈ ಎರಡು ರೀತಿಯಲ್ಲಿ ನ್ಯಾಯಮಾರ್ಗದಿಂದ ಸಂಪಾದಿಸಲ್ಪಟ್ಟ ಹಣದ ದುರುಪಯೋಗ ಉಂಟಾಗುತ್ತದೆಂದು ತಿಳಿಯಬೇಕು. ॥ ೬೪ ॥

**ದ್ವಾವಂಭಸಿ ನಿವೇಷ್ಟವ್ಯೌ ಗಲೇ ಬದ್ಧ್ವಾ ದೃಢಾಂ ಶಿಲಾಮ್ ।**
**ಧನವಂತಮದಾತಾರಂ ದರಿದ್ರಂ ಚಾತಪಸ್ವಿನಮ್ ॥ ೬೫ ॥**

ಧನವಂತನಾಗಿದ್ದರೂ ಸಹ ದಾನ ಮಾಡದವನನ್ನೂ, ದರಿದ್ರನಾಗಿದ್ದರೂ ಕಷ್ಟಪಟ್ಟು ದುಡಿಯಲಾರದವನನ್ನೂ - ಕುತ್ತಿಗೆಗೆ ದೊಡ್ಡ ಕಲ್ಲನ್ನು ಕಟ್ಟಿ ನೀರಿನಲ್ಲಿ ಮುಳುಗಿಸಬೇಕು. ॥ ೬೫ ॥

**ದ್ವಾವಿಮೌ ಪುರುಷವ್ಯಾಘ್ರ ಸೂರ್ಯಮಂಡಲಭೇದಿನೌ ।**
**ಪರಿವ್ರಾಡ್ ಯೋಗಯುಕ್ತಶ್ಚ ರಣೇ ಚಾಭಿಮುಖೋ ಹತಃ ॥ ೬೬ ॥**

ಹೇ ಪುರುಷಶ್ರೇಷ್ಠ ! ಯೋಗನಿಷ್ಠನಾದ ಪರಿವ್ರಾಜಕನು ಹಾಗೂ ಯುದ್ಧದಲ್ಲಿ ಶತ್ರುವನ್ನೆದುರಿಸಿ ಕಾದಾಡಿ ಸಾಯುವ ಯೋಧನು - ಈ ಇಬ್ಬರು ಸೂರ್ಯಮಂಡಲವನ್ನೂ ಭೇದಿಸಿಕೊಂಡು ಉತ್ತಮಗತಿಯನ್ನು ಪಡೆಯುತ್ತಾರೆ. ॥ ೬೬ ॥

**ತ್ರಯೋ ನ್ಯಾಯಾ ಮನುಷ್ಯಾಣಾಂ ಶ್ರೂಯಂತೇ ಭರತರ್ಷಭ ।**
**ಕನೀಯಾನ್ಮಧ್ಯಮಃ ಶ್ರೇಷ್ಠ ಇತಿ ವೇದವಿದೋ ವಿದುಃ ॥ ೬೭ ॥**

ಭರತಶ್ರೇಷ್ಠ ! ವೇದವರಿತ ಪಂಡಿತರು ಹೇಳುತ್ತಾರೆ - ಮನುಷ್ಯರ ಕಾರ್ಯಸಿದ್ಧಿಗಾಗಿ ಉತ್ತಮ, ಮಧ್ಯಮ ಹಾಗೂ ಅಧಮ - ಎಂಬ ಮೂರು ಪ್ರಕಾರದ ನ್ಯಾಯಾನುಕೂಲ ಉಪಾಯಗಳಿವೆ. (ದಂಡ - ಅಧಮ, ಭೇದನೀತಿ - ಮಧ್ಯಮ, ಸಾಮನೀತಿ - ಉತ್ತಮ) ॥ ೬೭ ॥

**ತ್ರಿವಿಧಾಃ ಪುರುಷಾ ರಾಜನ್ನುತ್ತಮಾಧಮಮಧ್ಯಮಾಃ ।**
**ನಿಯೋಜಯೇದ್ ಯಥಾವತ್ ತಾಂಸ್ತ್ರಿವಿಧೇಷ್ವೇವ ಕರ್ಮಸು ॥ ೬೮ ॥**

ಹೇ ರಾಜ ! ಮನುಷ್ಯರು ಉತ್ತಮ, ಮಧ್ಯಮ ಹಾಗೂ ಅಧಮರೆಂದು ಮೂರು ವಿಧವಾಗಿರುತ್ತಾರೆ. ಅದಕ್ಕನುಗುಣವಾಗಿ ಅವರನ್ನು ಮೂರುವಿಧವಾದ ಕರ್ಮಗಳಲ್ಲಿ ತೊಡಗಿಸಬೇಕು. ॥ ೬೮ ॥

**ತ್ರಯ ಏವಾಧನಾ ರಾಜನ್ ಭಾರ್ಯಾ ದಾಸಸ್ತಥಾ ಸುತಃ ।**
**ಯತ್ತೇ ಸಮಧಿಗಚ್ಛಂತಿ ಯಸ್ಯ ತೇ ತಸ್ಯ ತದ್ಧನಮ್ ॥ ೬೯ ॥**

ರಾಜನೇ ! ಹೆಂಡತಿ, ಮಗ ಮತ್ತು ಸೇವಕ ಇವರು ಅಧನರು. ಅರ್ಥಾತ್ ಅವರಿಗೆ ಅರ್ಥವನ್ನು ಕೂಡಿಸಿಟ್ಟುಕೊಳ್ಳುವ ಅಧಿಕಾರವಿಲ್ಲ. ಅವರು ಸಂಪಾದಿಸಿದುದೆಲ್ಲವೂ ಅವರು ಯಾರ ಅಧೀನದಲ್ಲಿರುತ್ತಾರೆಯೋ ಅವರಿಗೇ ಸೇರುತ್ತದೆ. ॥ ೬೯ ॥

**ಹರಣಂ ಚ ಪರಸ್ವಾನಾಂ ಪರದಾರಾಭಿಮರ್ಶನಮ್ ।**
**ಸುಹೃದಶ್ಚ ಪರಿತ್ಯಾಗಸ್ತ್ರಯೋ ದೋಷಾಃ ಕ್ಷಯಾವಹಾಃ ॥ ೭೦ ॥**

ಅನ್ಯರ ಸ್ವತ್ತನ್ನು ಅಪಹರಿಸುವುದು, ಪರಸ್ತ್ರೀಸಂಗ ಹಾಗೂ ಸನ್ಮಿತ್ರರ ಪರಿತ್ಯಾಗ - ಈ ಮೂರು ದೋಷಗಳು ಮನುಷ್ಯರ ನಾಶಕ್ಕೆ ಕಾರಣವಾಗುತ್ತವೆ. ॥ ೭೦ ॥

**ತ್ರಿವಿಧಂ ನರಕಸ್ಯೇದಂ ದ್ವಾರಂ ನಾಶನಮಾತ್ಮನಃ ।**
**ಕಾಮಃ ಕ್ರೋಧಸ್ತಥಾ ಲೋಭಸ್ತಸ್ಮಾದೇತತ್ತ್ರಯಂ ತ್ಯಜೇತ್ ॥ ೭೧ ॥**

ಕಾಮ, ಕ್ರೋಧ ಹಾಗೂ ಲೋಭ - ಇವು ಆತ್ಮನಾಶಕ್ಕೆ ಕಾರಣವಾಗುವ ನರಕದ ದ್ವಾರಗಳು. ಹಾಗಾಗಿ ಈ ಮೂರನ್ನೂ ಪರಿತ್ಯಜಿಸಬೇಕು. ॥ ೭೧ ॥

**ವರಪ್ರದಾನಂ ರಾಜ್ಯಂ ಚ ಪುತ್ರಜನ್ಮ ಚ ಭಾರತ ।**
**ಶತ್ರೋಶ್ಚ ಮೋಕ್ಷಣಂ ಕೃಚ್ಛ್ರಾತ್ ತ್ರೀಣಿ ಚೈಕಂ ಚ ತತ್ಸಮಮ್ ॥ ೭೨ ॥**

ಭಾರತ ! ವರಪ್ರದಾನ, ರಾಜ್ಯಪ್ರಾಪ್ತಿ ಹಾಗೂ ಪುತ್ರಜನ್ಮ ಈ ಮೂರೂ ಒಂದೆಡೆಯಾದರೆ, ಕಷ್ಟದಲ್ಲಿರುವ ಶತ್ರುವನ್ನು ವಿಮೋಚಿಸುವುದು ಇನ್ನೊಂದೆಡೆ. ಇದು ಮೇಲೆ ತಿಳಿಸಿದ ಮೂರಕ್ಕೂ ಸಮನಾದುದಾಗಿದೆ. ॥ ೭೨ ॥

**ಭಕ್ತಂ ಚ ಭಜಮಾನಂ ಚ ತವಾಸ್ಮೀತಿ ಚ ವಾದಿನಮ್ ।**
**ತ್ರೀನೇತಾಂಶ್ಶರಣಂ ಪ್ರಾಪ್ತಾನ್ ವಿಷಮೇಽಪಿ ನ ಸಂತ್ಯಜೇತ್ ॥ ೭೩ ॥**

ಶರಣಾಗತರಾಗಿ ಬಂದ ಭಕ್ತ, ಸೇವಕ, 'ನಾನು ನಿನ್ನವ' ಎಂದು ಹೇಳುವವನು - ಈ ಮೂವರನ್ನೂ ಎಂತಹ ವಿಪತ್ಕಾಲದಲ್ಲಿಯೂ ಸಹ ಕೈಬಿಡಬಾರದು. ॥ ೭೩ ॥

**ಚತ್ವಾರಿ ರಾಜ್ಞಾ ತು ಮಹಾಬಲೇನ**
**ವರ್ಜ್ಯಾನ್ಯಾಹುಃ ಪಂಡಿತಸ್ತಾನಿ ವಿದ್ಯಾತ್ ।**
**ಅಲ್ಪಪ್ರಜ್ಞೈಃ ಸಹ ಮಂತ್ರಂ ನ ಕುರ್ಯಾ-**
**ನ್ನ ದೀರ್ಘಸೂತ್ರೈರಲಸೈಶ್ಚಾರಣೈಶ್ಚ ॥ ೭೪ ॥**

ಅಲ್ಪಬುದ್ಧಿಯವರೊಡನೆ, ಕೆಲಸವನ್ನು ಬಹಳ ನಿಧಾನಿಸಿ ಮಾಡುವವರೊಡನೆ, ಹಿಂದೆ ಮುಂದೆ ನೋಡದೇ ಅವಸರದಿಂದ ಕೆಲಸ ಮಾಡುವವರೊಡನೆ ಹಾಗೂ ಸದಾ ಹೊಗಳುವವರೊಡನೆ ಎಂದೂ ಮಂತ್ರಾಲೋಚನೆಯನ್ನು ಮಾಡಬಾರದು.

ಮಹಾಬಲಿಷ್ಠನಾದ ರಾಜನಾದರೂ ಈ ನಾಲ್ಕನ್ನು ತ್ಯಜಿಸಬೇಕು. ಇವನ್ನು ಪಂಡಿತನಾದವನು ತಿಳಿದಿರಬೇಕು. ॥ ೭೪ ॥

**ಚತ್ವಾರಿ ತೇ ತಾತ ಗೃಹೇ ವಸಂತು**
**ಶ್ರಿಯಾಭಿಜುಷ್ಟಸ್ಯ ಗೃಹಸ್ಥಧರ್ಮೇ ।**
**ವೃದ್ಧೋ ಜ್ಞಾತಿರವಸನ್ನಃ ಕುಲೀನಃ**
**ಸಖಾ ದರಿದ್ರೋ ಭಗಿನೀ ಚಾನಪತ್ಯಾ ॥ ೭೫ ॥**

ತಂದೆಯೇ ! ಗೃಹಸ್ಥಧರ್ಮದಲ್ಲಿರುವ ಸಂಪತ್ಸಮೃದ್ಧವಾದ ನಿನ್ನ ನಿವಾಸದಲ್ಲಿ ಈ ನಾಲ್ವರು ವಾಸಿಸಲಿ – ನಿನ್ನ ಕುಟುಂಬದ ವೃದ್ಧ, ಸಂಕಟದಲ್ಲಿರುವ ಸತ್ಕುಲಪ್ರಸೂತನಾದ ಮನುಷ್ಯ, ಧನಹೀನನಾದ ಸ್ನೇಹಿತ ಮತ್ತು ಮಕ್ಕಳಿಲ್ಲದ ಸೋದರಿ. ॥ ೭೫ ॥

**ಚತ್ವಾರ್ಯಾಹ ಮಹಾರಾಜ ಸಾದ್ಯಸ್ಕಾನಿ ಬೃಹಸ್ಪತಿಃ ।**
**ಪೃಚ್ಛತೇ ತ್ರಿದಶೇಂದ್ರಾಯ ತಾನೀಮಾನಿ ನಿಬೋಧ ಮೇ ॥ ೭೬ ॥**

ಮಹಾರಾಜ ! ತ್ರಿದಶೇಂದ್ರನಾದ ಇಂದ್ರನು ಬೃಹಸ್ಪತಿಯನ್ನು ಕುರಿತು ತತ್ಕಾಲದಲ್ಲೇ ಫಲಕೊಡುವುವು ಯಾವುವು? ಎಂದು ಪ್ರಶ್ನಿಸಲಾಗಿ, ಬೃಹಸ್ಪತಿಯು ಯಥೋಚಿತವಾಗಿ ನಾಲ್ಕೆಂದು ಉತ್ತರಿಸಿದನು. ಬೃಹಸ್ಪತಿಯು ಹೇಳಿದುದನ್ನೇ ನಾನು ನಿನಗೂ ಹೇಳುವೆನು, ಕೇಳು. ॥ ೭೬ ॥

**ದೇವತಾನಾಂ ಚ ಸಂಕಲ್ಪಮನುಭಾವಂ ಚ ಧೀಮತಾಮ್ ।**
**ವಿನಯಂ ಕೃತವಿದ್ಯಾನಾಂ ವಿನಾಶಂ ಪಾಪಕರ್ಮಣಾಮ್ ॥ ೭೭ ॥**

ದೇವತೆಗಳ ಸಂಕಲ್ಪ, ಮಹಾತ್ಮರ ಪ್ರಭಾವ, ಪೂರ್ಣವಿದ್ಯಾವಂತರ ವಿನಯ, ಪಾಪಿಷ್ಠರ ನಾಶ – ಇವುಗಳು ಸದ್ಯಃಫಲದಾಯಕಗಳಾಗಿರುತ್ತವೆ. ॥ ೭೭ ॥

**ಚತ್ವಾರಿ ಕರ್ಮಾಣ್ಯಭಯಂಕರಾಣಿ**
**ಭಯಂ ಪ್ರಯಚ್ಛಂತ್ಯಯಥಾಕೃತಾನಿ ।**
**ಮಾನಾಗ್ನಿಹೋತ್ರಮುತ ಮಾನಮೌನಂ**
**ಮಾನೇನಾಧೀತಮುತ ಮಾನಯಜ್ಞಃ ॥ ೭೮ ॥**

ಆದರಪೂರ್ವಕವಾಗಿ ಮಾಡಲ್ಪಟ್ಟ ಅಗ್ನಿಹೋತ್ರ, ಶ್ರದ್ಧೆಯಿಂದ ಆಚರಿಸಲ್ಪಟ್ಟ ಮೌನ, ಆದರದಿಂದ ಮಾಡಿದ ಅಧ್ಯಯನ ಮತ್ತು ಶ್ರದ್ಧೆಯಿಂದ ಮಾಡಿದ ಯಜ್ಞ –ಈ ನಾಲ್ಕು ಕರ್ಮಗಳು ಅಭಯಪ್ರದಾಯಕಗಳಾಗಿವೆ. ಆದರೆ ಶ್ರದ್ಧೆಯಿಂದ ಮಾಡದಿದ್ದಲ್ಲಿ ಇವು (ಭಯವನ್ನು) ಅಶ್ರೇಯಸ್ಸನ್ನುಂಟುಮಾಡುತ್ತವೆ. ॥ ೭೮ ॥

**ಪಂಚಾಗ್ನಯೋ ಮನುಷ್ಯೇಣ ಪರಿಚರ್ಯಾಃ ಪ್ರಯತ್ನತಃ ।**
**ಪಿತಾ ಮಾತಾಗ್ನಿರಾತ್ಮಾ ಚ ಗುರುಶ್ಚ ಭರತರ್ಷಭ ॥ ೭೯ ॥**

ಐದು ಅಗ್ನಿಗಳನ್ನು ಮಾನವನು ಪ್ರಯತ್ನಪೂರ್ವಕವಾಗಿ ಪೂಜಿಸಬೇಕು. ಅವೆಂದರೆ – ತಂದೆ, ತಾಯಿ, ಯಜ್ಞೇಶ್ವರ, ಆತ್ಮಾ ಮತ್ತು ಗುರು. ॥ ೭೯ ॥

**ಪಂಚೈವ ಪೂಜಯಂಲ್ಲೋಕೇ ಯಶಃ ಪ್ರಾಪ್ನೋತಿ ಕೇವಲಮ್ ।**
**ದೇವಾನ್ ಪಿತೄನ್ ಮನುಷ್ಯಾಂಶ್ಚ ಭಿಕ್ಷೂನತಿಥಿಪಂಚಮಾನ್ ॥ ೮೦ ॥**

ದೇವತೆಗಳನ್ನು, ಪಿತೃದೇವತೆಗಳನ್ನು, ಮನುಷ್ಯರನ್ನು, ಸಂನ್ಯಾಸಿಗಳನ್ನು ಹಾಗೂ ಅತಿಥಿಗಳನ್ನು ಪೂಜಿಸುವ ಮನುಷ್ಯನು ಲೋಕದಲ್ಲಿ ಪರಿಶುದ್ಧವಾದ ಕೀರ್ತಿಯನ್ನು ಪಡೆಯುತ್ತಾನೆ. ॥ ೮೦ ॥

**ಪಂಚ ತ್ವಾನುಗಮಿಷ್ಯಂತಿ ಯತ್ರ ಯತ್ರ ಗಮಿಷ್ಯಸಿ ।**
**ಮಿತ್ರಾಣ್ಯಮಿತ್ರಾ ಮಧ್ಯಸ್ಥಾ ಉಪಜೀವ್ಯೋಪಜೀವಿನಃ ॥ ೮೧ ॥**

ರಾಜನೇ ! ಸ್ನೇಹಿತರು, ಶತ್ರುಗಳು, ಉದಾಸೀನರು, ನಿನಗೆ ಆಶ್ರಯಕೊಡುವವರು ಹಾಗೂ ನಿನ್ನಿಂದ ಆಶ್ರಯವನ್ನು ಪಡೆದಿರುವವರು – ಈ ಐವರೂ ನೀನು ಎಲ್ಲಿಗೇ ಹೋದರೂ ನಿನ್ನ ಬೆನ್ನ ಹಿಂದೆಯೇ ಬರುತ್ತಾರೆ. ॥ ೮೧ ॥

**ಪಂಚೇಂದ್ರಿಯಸ್ಯ ಮರ್ತ್ಯಸ್ಯ ಚ್ಛಿದ್ರಂ ಚೇದೇಕಮಿಂದ್ರಿಯಮ್ ।**
**ತತೋಽಸ್ಯ ಸ್ರವತಿ ಪ್ರಜ್ಞಾ ದೃತೇಃ ಪಾತ್ರಾದಿವೋದಕಮ್ ॥ ೮೨ ॥**

ಪಂಚೇಂದ್ರಿಯಗಳುಳ್ಳ ಮನುಷ್ಯನ ಯಾವುದಾದರೊಂದು ಇಂದ್ರಿಯದಲ್ಲಿ ಸಣ್ಣರಂಧ್ರ ಉಂಟಾದರೂ (ವಿಷಯ ಲಾಲಸೆಗೆ ತುತ್ತಾದರೂ), ಮನುಷ್ಯನ ಪ್ರಜ್ಞೆಯು – ಚರ್ಮದ ಚೀಲದಲ್ಲುಂಟಾದ ರಂಧ್ರದಿಂದ ನೀರು ಸ್ರವಿಸುವಂತೆ – ಹರಿದು ಹೋಗುತ್ತದೆ. ॥ ೮೨ ॥

**ಷಡ್ ದೋಷಾಃ ಪುರುಷೇಣೇಹ ಹಾತವ್ಯಾ ಭೂತಿಮಿಚ್ಛತಾ ।**
**ನಿದ್ರಾ ತಂದ್ರಾ ಭಯಂ ಕ್ರೋಧ ಆಲಸ್ಯಂ ದೀರ್ಘಸೂತ್ರತಾ ॥ ೮೩ ॥**

ಐಶ್ವರ್ಯವನ್ನು ಅಥವಾ ಉನ್ನತಿಯನ್ನಪೇಕ್ಷಿಸುವವನು ನಿದ್ರೆ, ತೂಕಡಿಕೆ, ಭಯ, ಕ್ರೋಧ, ಆಲಸ್ಯ ಮತ್ತು ಕಾರ್ಯವನ್ನು ಬಹು ನಿಧಾನವಾಗಿ ಮಾಡುವುದು ಎಂಬ ಈ ಆರು ದೋಷಗಳನ್ನು ತ್ಯಜಿಸಬೇಕು. ॥ ೮೩ ॥

**ಷಡಿಮಾನ್ ಪುರುಷೋ ಜಹ್ಯಾದ್ ಭಿನ್ನಾಂ ನಾವಮಿವಾರ್ಣವೇ ।**
**ಅಪ್ರವಕ್ತಾರಮಾಚಾರ್ಯಮನಧೀಯಾನಮೃತ್ವಿಜಮ್ ॥ ೮೪ ॥**

**ಅರಕ್ಷಿತಾರಂ ರಾಜಾನಂ ಭಾರ್ಯಾಂ ಚಾಪ್ರಿಯವಾದಿನೀಮ್ ।**
**ಗ್ರಾಮಕಾಮಂ ಚ ಗೋಪಾಲಂ ವನಕಾಮಂ ಚ ನಾಪಿತಮ್ ॥ ೮೫ ॥**

ಉಪದೇಶ ನೀಡದಿರುವ ಆಚಾರ್ಯ, ಮಂತ್ರೋಚ್ಚಾರಣೆ ಮಾಡದಿರುವ ಅಥವಾ ವೇದಾಧ್ಯಯನ ಮಾಡದಿರುವ ಋತ್ವಿಜ, ರಕ್ಷಣೆಮಾಡಲು ಅಸಮರ್ಥನಾದ ರಾಜ, ಪ್ರಿಯವಾದ ಮಾತುಗಳನ್ನಾಡದಿರುವ ಹೆಂಡತಿ, ಸದಾ ಊರಿನಲ್ಲಿಯೇ ಇರಲಿಚ್ಛಿಸುವ ಗೋಪಾಲ ಮತ್ತು ಸದಾ ಅರಣ್ಯದಲ್ಲಿಯೇ ಇರಲಿಚ್ಛಿಸುವ ಕ್ಷೌರಿಕ –ಈ ಆರು ಮಂದಿಯನ್ನು ಬುದ್ಧಿವಂತನಾದವನು ಸಮುದ್ರದಲ್ಲಿ ಒಡೆದುಹೋದ ಒಂದು ನಾವೆಯನ್ನು ಪ್ರಯಾಣಿಕರು ಪರಿತ್ಯಜಿಸುವಂತೆ ಪರಿತ್ಯಜಿಸಬೇಕು. ॥ ೮೪, ೮೫ ॥

**ಷಡೇವ ತು ಗುಣಾಃ ಪುಂಸಾ ನ ಹಾತವ್ಯಾಃ ಕದಾಚನ ।**
**ಸತ್ಯಂ ದಾನಮನಾಲಸ್ಯಮನಸೂಯಾ ಕ್ಷಮಾ ಧೃತಿಃ ॥ ೮೬ ॥**

ಮಾನವನಿಂದ ಈ ಆರು ಗುಣಗಳು ಎಂದೂ ಯಾವ ಕಾರಣದಿಂದಲೂ ಬಿಡಲ್ಪಡತಕ್ಕದ್ದಲ್ಲ. ಅವೆಂದರೆ – ಸತ್ಯ, ದಾನ, ಆಲಸ್ಯವಿಲ್ಲದಿರುವಿಕೆ, ಅಸೂಯೆ ಪಡದಿರುವುದು (ಇನ್ನೊಬ್ಬರಲ್ಲಿ ದೋಷವನ್ನು ಕಾಣುವ ಪ್ರವೃತ್ತಿಯ ಅಭಾವ), ಕ್ಷಮೆ ಮತ್ತು ಧೈರ್ಯ. ॥ ೮೬ ॥

**ಅರ್ಥಾಗಮೋ ನಿತ್ಯಮರೋಗಿತಾ ಚ**
**ಪ್ರಿಯಾ ಚ ಭಾರ್ಯಾ ಪ್ರಿಯವಾದಿನೀ ಚ ।**
**ವಶ್ಯಶ್ಚ ಪುತ್ರೋಽರ್ಥಕರೀ ಚ ವಿದ್ಯಾ**
**ಷಡ್ ಜೀವಲೋಕಸ್ಯ ಸುಖಾನಿ ರಾಜನ್ ॥ ೮೭ ॥**

ಧನಪ್ರಾಪ್ತಿ, ನಿತ್ಯ ಆರೋಗ್ಯ, ಪ್ರಿಯಳಾಗಿಯೂ ಪ್ರಿಯವಾದಿನಿಯಾಗಿಯೂ ಇರುವ ಪತ್ನಿ, ವಿಧೇಯನಾದ ಪುತ್ರ, ಹಣಸಂಪಾದನೆಗೆ ಅನುಕೂಲಿಸುವ ವಿದ್ಯೆ – ಈ ಆರು ಲೋಕದಲ್ಲಿ ಮನುಷ್ಯನಿಗೆ ಸುಖದಾಯಕಗಳು. ॥ ೮೭ ॥

**ಷಣ್ಣಾಮಾತ್ಮನಿ ನಿತ್ಯಾನಾಮೈಶ್ವರ್ಯಂ ಯೋಽಧಿಗಚ್ಛತಿ ।**
**ನ ಸ ಪಾಪೈಃ ಕುತೋಽನರ್ಥೈರ್ಯುಜ್ಯತೇ ವಿಜಿತೇಂದ್ರಿಯಃ ॥ ೮೮ ॥**

ತನ್ನಲ್ಲಿಯೇ ಹುದುಗಿಕೊಂಡಿರುವ ಆರು ನಿತ್ಯಶತ್ರುಗಳ ಮೇಲೆ (ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯ) ಯಾವನು ಪ್ರಭುತ್ವವನ್ನಿಟ್ಟುಕೊಂಡಿರುತ್ತಾನೆಯೋ ಅಂತಹ ಜಿತೇಂದ್ರಿಯನಾದ ಮಹಾಪುರುಷನು ಯಾವ ವಿಧವಾದ ಪಾಪಗಳಿಂದಲೂ ಲಿಪ್ತನಾಗುವುದಿಲ್ಲ, ಯಾವ ವಿಧವಾದ ಅನರ್ಥಗಳಿಂದಲೂ ಯುಕ್ತನಾಗುವುದಿಲ್ಲ. ॥ ೮೮ ॥

**ಷಡಿಮೇ ಷಟ್ಸು ಜೀವಂತಿ ಸಪ್ತಮೋ ನೋಪಲಭ್ಯತೇ ।**
**ಚೌರಾಃ ಪ್ರಮತ್ತೇ ಜೀವಂತಿ ವ್ಯಾಧಿತೇಷು ಚಿಕಿತ್ಸಕಾಃ ॥ ೮೯ ॥**
**ಪ್ರಮದಾಃ ಕಾಮಯಾನೇಷು ಯಜಮಾನೇಷು ಯಾಜಕಾಃ ।**
**ರಾಜಾ ವಿವದಮಾನೇಷು ನಿತ್ಯಂ ಮೂರ್ಖೇಷು ಪಂಡಿತಾಃ ॥ ೯೦ ॥**

ಕೆಳಗೆ ತಿಳಿಸಿರುವ ಆರು ವಿಧದ ಮನುಷ್ಯರು ಆರು ಪ್ರಕಾರದ ಜನಗಳಿಂದಾ ತಮ್ಮ ಜೀವಿಕೆಯನ್ನು ಕಂಡುಕೊಳ್ಳುತ್ತಾರೆ. ಏಳನೆಯ ಪ್ರಕಾರ ಕಂಡುಬರುವುದಿ ಕಳ್ಳರು ಅಜಾಗರೂಕತೆಯುಳ್ಳ ಮನುಷ್ಯರಿಂದಾಗಿ, ವೈದ್ಯರು ರೋಗಿಗಳಿಂದಾ ಕಾಮಿನಿಯರು ಕಾಮುಕರಿಂದಾಗಿ, ಪುರೋಹಿತರು ಯಾಗಮಾಡು ಯಜಮಾನರನ್ನವಲಂಬಿಸಿ, ವಿವಾದ ಮಾಡುವ ಪ್ರಜೆಗಳನ್ನವಲಂಬಿಸಿ ರಾಜರು ಹಾಗೂ ಮೂರ್ಖರಿಂದಾಗಿ ಪಂಡಿತರೂ ಜೀವಿಸುತ್ತಾರೆ. ॥ ೮೯, ೯೦ ॥

**ಷಡಿಮಾನಿ ವಿನಶ್ಯಂತಿ ಮುಹೂರ್ತಮನವೇಕ್ಷಣಾತ್ ।**
**ಗಾವಃ ಸೇವಾ ಕೃಷಿರ್ಭಾರ್ಯಾ ವಿದ್ಯಾ ವೃಷಲಸಂಗತಿಃ ॥ ೯೧ ॥**

ಮುಹೂರ್ತಕಾಲ ಉಪೇಕ್ಷೆ ಮಾಡಿದರೂ ಸಹ – ಹಸು, ಸೇವೆ ಕೃಷಿ, ಪತ್ನಿ, ವಿದ್ಯೆ, ಹಾಗೂ ಶೂದ್ರ (ಸೇವಕ) ಸಂಗ – ಈ ಆರು ವಿನಾಶವನ್ನು ಹೊಂದುತ್ತವೆ. ॥ ೯೧ ॥

**ಷಡೇತೇ ಹ್ಯವಮನ್ಯಂತೇ ನಿತ್ಯಂ ಪೂರ್ವೋಪಕಾರಿಣಮ್ ।**
**ಆಚಾರ್ಯಂ ಶಿಕ್ಷಿತಾಃ ಶಿಷ್ಯಾಃ ಕೃತದಾರಾಶ್ಚ ಮಾತರಮ್ ॥ ೯೨ ॥**
**ನಾರೀಂ ವಿಗತಕಾಮಾಸ್ತು ಕೃತಾರ್ಥಾಶ್ಚ ಪ್ರಯೋಜಕಮ್ ।**
**ನಾವಂ ನಿಸ್ತೀರ್ಣಕಾಂತಾರಾ ಆತುರಾಶ್ಚ ಚಿಕಿತ್ಸಕಮ್ ॥ ೯೩ ॥**

ಆ ಆರುಮಂದಿ ತಮಗೆ ಪೂರ್ವದಲ್ಲಿ ಉಪಕರಿಸಿದವನನ್ನು ಅವಮಾನಿಸುತ್ತಾರೆ. (ಸಂಪೂರ್ಣವಾಗಿ ಮರೆತು ಬಿಡುತ್ತಾರೆ). ವಿದ್ಯಾಭ್ಯಾಸ ಮುಗಿಸಿದ ಶಿಷ್ಯರು ಗುರುವನ್ನೂ, ಮದುವೆಯಾದ ಮಕ್ಕಳು ತಾಯಿಯನ್ನೂ, ಕಾಮದ ಉಪಶಾಂತಿಯಾದನಂತರ ಪುರುಷನು ತಾನು ಉಪಭೋಗಿಸಿದ ಸ್ತ್ರೀಯನ್ನೂ, ತಾನಾರಂಭಿಸಿದ ಕಾರ್ಯದಲ್ಲಿ ಕೃತಕೃತ್ಯನಾದ (ಫಲ ಪಡೆದ) ನಂತರ ಅದಕ್ಕೆ ನೆರವಾದವರನ್ನೂ, ಸಮುದ್ರ ದಾಟಿದ ನಂತರ ದಾಟಿಸಿದ ನೌಕೆ ಅಥವಾ ನಾವಿಕನನ್ನೂ, ರೋಗ ಗುಣವಾದ ನಂತರ ರೋಗಿಯು ಗುಣಪಡಿಸಿದ ವೈದ್ಯನನ್ನೂ ಮರೆತುಬಿಡುತ್ತಾರೆ. ॥ ೯೨, ೯೩. ॥

**ಆರೋಗ್ಯಮಾನೃಣ್ಯಮವಿಪ್ರವಾಸಃ**
**ಸದ್ಭಿರ್ಮನುಷ್ಯೈಃ ಸಹ ಸಂಪ್ರಯೋಗಃ ।**
**ಸ್ವಪ್ರತ್ಯಯಾ ವೃತ್ತಿರಭೀತವಾಸಃ**
**ಷಡ್ ಜೀವಲೋಕಸ್ಯ ಸುಖಾನಿ ರಾಜನ್ ॥ ೯೪ ॥**

ರಾಜನೇ ! ಆರೋಗ್ಯವಾಗಿರುವಿಕೆ, ಋಣವಿಲ್ಲದಿರುವಿಕೆ, ವಿದೇಶಪ್ರಯಾಣ ಮಾಡದಿರುವಿಕೆ, ಸಜ್ಜನರೊಂದಿಗಿನ ಸಹವಾಸ, ತನ್ನ ರುಚಿಗನುಗುಣವಾಗಿ ವೃತ್ತಿ ನಿರ್ಭೀತವಾಸ - ಈ ಆರು ಈ ಜೀವಲೋಕದ ಸುಖಗಳು. ॥ ೯೪ ॥

**ಈರ್ಷ್ಯೀ ಘೃಣೀ ನ ಸಂತುಷ್ಟಃ ಕ್ರೋಧನೋ ನಿತ್ಯಶಂಕಿತಃ ।**
**ಪರಭಾಗ್ಯೋಪಜೀವೀ ಚ ಷಡೇತೇ ನಿತ್ಯದುಃಖಿತಾಃ ॥ ೯೫ ॥**

ಅಸೂಯೆಯಿಂದ ಕೂಡಿರುವವನು, ಅತ್ಯಾಸೆಯುಳ್ಳವನು, ಅತೃಪ್ತನು, ಬಹುಕೋಪವುಳ್ಳವನು, ಎಲ್ಲ ವಿಷಯಗಳನ್ನೂ ಸಂದೇಹದಿಂದಲೇ ಕಾಣುವವನು ಮತ್ತು ಇತರರ ಐಶ್ವರ್ಯದಿಂದಲೇ ಜೀವಿಸುವವನು - ಈ ಆರು ಜನರೂ ನಿತ್ಯದುಃಖಿಗಳೆಂದು ಹೇಳುತ್ತಾರೆ. ॥ ೯೫ ॥

**ಸಪ್ತ ದೋಷಾಃ ಸದಾ ರಾಜ್ಞಾ ಹಾತವ್ಯಾ ವ್ಯಸನೋದಯಾಃ ।**
**ಪ್ರಾಯಶೋ ಯೈರ್ವಿನಶ್ಯಂತಿ ಕೃತಮೂಲಾ ಅಪೀಶ್ವರಾಃ ॥ ೯೬ ॥**
**ಸ್ತ್ರಿಯೋಽಕ್ಷಾ ಮೃಗಯಾ ಪಾನಂ ವಾಕ್‌ಪಾರುಷ್ಯಂ ಚ ಪಂಚಮಮ್ ।**
**ಮಹಚ್ಚ ದಂಡಪಾರುಷ್ಯಮರ್ಥದೂಷಣಮೇವ ಚ ॥ ೯೭ ॥**

ಸ್ತ್ರೀವಿಷಯಕ ಆಸಕ್ತಿ, ಜೂಜು, ಬೇಟೆ, ಮದ್ಯಪಾನ, ಕಠಿಣವಾದ ಮಾತು, ಕಠೋರವಾದ ಶಿಕ್ಷೆ ವಿಧಿಸುವುದು ಹಾಗೂ ಧನದ ದುರುಪಯೋಗ ಈ ಏಳು ದೋಷಗಳನ್ನು ರಾಜನಾದವನು ಖಂಡಿತವಾಗಿಯೂ ವರ್ಜಿಸಬೇಕು. ರಾಜರು ದೃಢಮೂಲವುಳ್ಳವರಾಗಿದ್ದರೂ ಪ್ರಾಯಶಃ ಇವುಗಳಿಂದ ವಿನಾಶವನ್ನು ಹೊಂದುತ್ತಾರೆ. ॥ ೯೬, ೯೭ ॥

**ಅಷ್ಟೌ ಪೂರ್ವನಿಮಿತ್ತಾನಿ ನರಸ್ಯ ವಿನಶಿಷ್ಯತಃ ।**
**ಬ್ರಾಹ್ಮಣಾನ್ ಪ್ರಥಮಂ ದ್ವೇಷ್ಟಿ ಬ್ರಾಹ್ಮಣೈಶ್ಚ ವಿರುಧ್ಯತೇ ॥ ೯೮ ॥**
**ಬ್ರಾಹ್ಮಣಸ್ವಾನಿ ಚಾದತ್ತೇ ಬ್ರಾಹ್ಮಣಾಂಶ್ಚ ಜಿಘಾಂಸತಿ ।**
**ರಮತೇ ನಿಂದಯಾ ಚೈಷಾಂ ಪ್ರಶಂಸಾಂ ನಾಭಿನಂದತಿ ॥ ೯೯ ॥**
**ನೈನಾನ್ ಸ್ಮರತಿ ಕೃತ್ಯೇಷು ಯಾಚಿತಶ್ಚಾಭ್ಯಸೂಯತಿ ।**
**ಏತಾನ್ ದೋಷಾನ್ನರಃ ಪ್ರಾಜ್ಞೋ ಬುಧ್ಯೇದ್ ಬುದ್ಧ್ವಾ ವಿಸರ್ಜಯೇತ್ ॥ ೧೦೦ ॥**

ವಿನಾಶಹೊಂದುವವನಲ್ಲಿ ಈ ಎಂಟು ಪೂರ್ವಸೂಚನೆಗಳಿರುತ್ತವೆ. ಅವೆಂದರೆ– ಬ್ರಾಹ್ಮಣರನ್ನು ದ್ವೇಷಿಸುವುದು, ಬ್ರಾಹ್ಮಣರ ವಿರೋಧಕ್ಕೆ ಪಾತ್ರರಾಗುವುದು, ಅವರ ಸ್ವತ್ತನ್ನು ಅಪಹರಿಸುವುದು, ಅವರನ್ನು ಕೊಲ್ಲುವುದು ಅಥವಾ ಹಿಂಸಿಸುವುದು, ಅವರನ್ನು ನಿಂದಿಸಿ

ಆನಂದಿಸುವುದು, ಅವರ ಪ್ರಶಂಸೆಯನ್ನು ಕೇಳಲಿಚ್ಛಿಸದಿರುವುದು, ದೇವಕಾರ್ಯ-ಪಿತೃಕಾರ್ಯಗಳಲ್ಲಿ ಅವರನ್ನು ಸ್ಮರಿಸದಿರುವುದು ಹಾಗೂ ಅವರು ಯಾಚಿಸಿದರೆ ಕೋಪಗೊಳ್ಳುವುದು. ಈ ದೋಷಗಳನ್ನು ಪಂಡಿತನು ಅರಿಯಬೇಕು. ಅರಿತು ಅವನ್ನು ವರ್ಜಿಸಬೇಕು. ॥ ೯೮, ೯೯, ೧೦೦ ॥

**ಅಷ್ಟಾವಿಮಾನಿ ಹರ್ಷಸ್ಯ ನವನೀತಾನಿ ಭಾರತ ।**
**ವರ್ತಮಾನಾನಿ ದೃಶ್ಯಂತೇ ತಾನ್ಯೇವ ಸ್ವಸುಖಾನ್ಯಪಿ ॥ ೧೦೧ ॥**
**ಸಮಾಗಮಶ್ಚ ಸಖಿಭಿರ್ಮಹಾಂಶ್ಚೈವ ಧನಾಗಮಃ ।**
**ಪುತ್ರೇಣ ಚ ಪರಿಷ್ವಂಗಃ ಸಂನಿಪಾತಶ್ಚ ಮೈಥುನೇ ॥ ೧೦೨ ॥**
**ಸಮಯೇ ಚ ಪ್ರಿಯಾಲಾಪಃ ಸ್ವಯೂಥ್ಯೇಷು ಸಮುನ್ನತಿಃ ।**
**ಅಭಿಪ್ರೇತಸ್ಯ ಲಾಭಶ್ಚ ಪೂಜಾ ಚ ಜನಸಂಸದಿ ॥ ೧೦೩ ॥**

ಹೇ ಭಾರತ ! ಈ ಎಂಟು ಹರ್ಷದ ಸಾರಸರ್ವಸ್ವವಾಗಿವೆ. ಮನುಷ್ಯನ ಹೆಚ್ಚಿನ ಲೌಕಿಕ ಸುಖ ಇವುಗಳಲ್ಲಿಯೇ ಕಂಡುಬರುತ್ತದೆ. ಅವೆಂದರೆ – ಸ್ನೇಹಿತರೊಡನೆ ಸಮಾಗಮ, ಅಧಿಕ ಧನಪ್ರಾಪ್ತಿ, ಪುತ್ರನ ಆಲಿಂಗನ, ಮೈಥುನದಲ್ಲಿ ಒಂದಾಗುವಿಕೆ, ಸಮಯದಲ್ಲಿ ಪ್ರಿಯನುಡಿಗಳು, ತನ್ನ ವರ್ಗದ ಜನರಲ್ಲಿ ಅತ್ಯಂತ ಉನ್ನತಿ ಪಡೆಯುವುದು, ಇಚ್ಛೆಪಟ್ಟ ವಸ್ತುವಿನ ಪ್ರಾಪ್ತಿ ಹಾಗೂ ಸಮಾಜದಲ್ಲಿ ಸಮ್ಮಾನ. ॥ ೧೦೧, ೧೦೨, ೧೦೩ ॥

**ಅಷ್ಟೌ ಗುಣಾಃ ಪುರುಷಂ ದೀಪಯಂತಿ**
**ಪ್ರಜ್ಞಾ ಚ ಕೌಲ್ಯಂ ಚ ದಮಃ ಶ್ರುತಂ ಚ ।**
**ಪರಾಕ್ರಮಶ್ಚಾಬಹುಭಾಷಿತಾ ಚ**
**ದಾನಂ ಯಥಾಶಕ್ತಿ ಕೃತಜ್ಞತಾ ಚ ॥ ೧೦೪ ॥**

ಒಳ್ಳೆಯ ಬುದ್ಧಿ, ಸತ್ಕುಲಪ್ರಸೂತಿ, ಇಂದ್ರಿಯನಿಗ್ರಹ, ಶಾಸ್ತ್ರಜ್ಞಾನ, ಪರಾಕ್ರಮ, ಹೆಚ್ಚು ಮಾತನಾಡದಿರುವುದು, ಶಕ್ತಿಯಿದ್ದಷ್ಟು ದಾನಮಾಡುವುದು ಹಾಗೂ ಕೃತಜ್ಞತೆ – ಈ ಎಂಟು ಗುಣಗಳು ಮನುಷ್ಯನ ಖ್ಯಾತಿಯನ್ನು ಹೆಚ್ಚಿಸುತ್ತವೆ. ॥ ೧೦೪ ॥

**ನವದ್ವಾರಮಿದಂ ವೇಶ್ಮ ತ್ರಿಸ್ಥೂಣಂ ಪಂಚಸಾಕ್ಷಿಕಮ್ ।**
**ಕ್ಷೇತ್ರಜ್ಞಾಧಿಷ್ಠಿತಂ ವಿದ್ವಾನ್ ಯೋ ವೇದ ಸ ಪರಃ ಕವಿಃ ॥ ೧೦೫ ॥**

ಶರೀರರೂಪಿಯಾದ ಈ ಮನೆಯು ಒಂಭತ್ತು (ಕಣ್ಣು, ಕಿವಿ, ಮುಂ.) ದ್ವಾರಗಳಿಂದಲೂ, ಮೂರು (ವಾತ, ಪಿತ್ತ, ಕಫ) ಸ್ತಂಭಗಳಿಂದಲೂ ಹಾಗೂ ಐದು (ಜ್ಞಾನೇಂದ್ರಿಯ) ಸಾಕ್ಷಿಗಳಿಂದಲೂ ಕೂಡಿದೆ ಹಾಗೂ ಆತ್ಮನ ನಿವಾಸಸ್ಥಾನವಾಗಿದೆ. ಇದನ್ನರಿತ ಪಂಡಿತನು ಮಹಾ ಜ್ಞಾನಿಯಾಗಿರುತ್ತಾನೆ. ॥ ೧೦೫ ॥

**ದಶ ಧರ್ಮಂ ನ ಜಾನಂತಿ ಧೃತರಾಷ್ಟ್ರ ನಿಬೋಧ ತಾನ್ ।**
**ಮತ್ತಃ ಪ್ರಮತ್ತಃ ಉನ್ಮತ್ತಃ ಶ್ರಾಂತಃ ಕ್ರುದ್ಧೋ ಬುಭುಕ್ಷಿತಃ ॥ ೧೦೭ ॥**
**ತ್ವರಮಾಣಶ್ಚ ಲುಬ್ಧಶ್ಚ ಭೀತಃ ಕಾಮೀ ಚ ತೇ ದಶ ।**
**ತಸ್ಮಾದೇತೇಷು ಸರ್ವೇಷು ನ ಪ್ರಸಜ್ಜೇತ ಪಂಡಿತಃ ॥ ೧೦೮ ॥**

ಹೇ ಧೃತರಾಷ್ಟ್ರ ! ಈ ಹತ್ತು ಜನ ಧರ್ಮವೆಂದರೇನೆಂದು ತಿಳಿದವರಾಗಿರುವುದಿಲ್ಲ, ಅವರಾರೆಂದು ತಿಳಿ. ಮದ್ಯಪಾನ ಮಾಡಿದವನು, ಧನಮದದಿಂದ ಕೊಬ್ಬಿರುವವನು, ಹುಚ್ಚನು, ಬಹಳ ಬಳಲಿದವನು, ಬಹುವಾಗಿ ಕೋಪಗೊಂಡಿರುವವನು, ಬಹುವಾಗಿ ಹಸಿದಿರುವವನು, ಕಾರ್ಯವನ್ನು ಅತ್ಯವಸರದಿಂದ ಮಾಡಲು ಹೋಗುವವನು, ಲೋಭಿ, ಭೀತನಾಗಿರುವವನು ಹಾಗೂ ಕಾಮುಕನು – ಇವರೇ ಆ ಹತ್ತು ಜನ. ಇವರ ವಿಷಯದಲ್ಲಿ ವಿದ್ವಾಂಸನಾದವನು ಆಸಕ್ತಿಯನ್ನು ವಹಿಸಬಾರದು. ॥ ೧೦೭, ೧೦೮ ॥

**ಅತ್ರೈವೋದಾಹರಂತೀಮಮಿತಿಹಾಸಂ ಪುರಾತನಮ್ ।**
**ಪುತ್ರಾರ್ಥಮಸುರೇಂದ್ರೇಣ ಗೀತಂ ಚೈವ ಸುಧನ್ವನಾ ॥ ೧೦೯ ॥**

ಇದೇ ವಿಷಯವಾಗಿ ಅಸುರರ ರಾಜನಾದ ಪ್ರಹ್ಲಾದನು ಪುತ್ರನ ವಿಷಯವಾಗಿ ಸುಧನ್ವನೊಂದಿಗೆ ಹೇಳಿದ ಪುರಾತನವಾದ, ಇತಿಹಾಸ ಪ್ರಸಿದ್ಧವಾದ ಉಪದೇಶವನ್ನು ನೀತಿಜ್ಞರು ಈಗಲೂ ಉದಾಹರಿಸುತ್ತಾರೆ. ॥ ೧೦೯ ॥

**ಯಃ ಕಾಮಮನ್ಯೂ ಪ್ರಜಹಾತಿ ರಾಜಾ**
**ಪಾತ್ರೇ ಪ್ರತಿಷ್ಠಾಪಯತೇ ಧನಂ ಚ ।**
**ವಿಶೇಷವಿಚ್ಛ್ರುತವಾನ್ ಕ್ಷಿಪ್ರಕಾರೀ**
**ತಂ ಸರ್ವಲೋಕಃ ಕುರುತೇ ಪ್ರಮಾಣಮ್ ॥ ೧೧೦ ॥**

ಯಾವ ರಾಜನು ಕಾಮ ಹಾಗೂ ಕ್ರೋಧಗಳನ್ನು ವರ್ಜಿಸಿರುವನೋ, ಸತ್ಪಾತ್ರರಿಗೆ ದಾನವನ್ನು ಮಾಡುವನೋ, ಪಾತ್ರಾಪಾತ್ರಗಳ ಬಗ್ಗೆ ತಿಳಿದಿರುವನೋ, ಶಾಸ್ತ್ರಗಳ ಅಧ್ಯಯನವನ್ನು ಮಾಡಿರುವನೋ, ಆಲಸ್ಯಮಾಡದೇ ಶೀಘ್ರವಾಗಿ ತನ್ನ ಕರ್ತವ್ಯಗಳನ್ನು ನಿರ್ವಹಿಸುವನೋ ಅವನನ್ನು ಲೋಕದ ಜನರೆಲ್ಲರೂ ಪ್ರಮಾಣವಾಗಿ ಅಂಗೀಕರಿಸುತ್ತಾರೆ. ॥ ೧೧೦ ॥

**ಜಾನಾತಿ ವಿಶ್ವಾಸಯಿತುಂ ಮನುಷ್ಯಾನ್**
**ವಿಜ್ಞಾತದೋಷೇಷು ದಧಾತಿ ದಂಡಮ್ ।**
**ಜಾನಾತಿ ಮಾತ್ರಾಂ ಚ ತಥಾ ಕ್ಷಮಾಂ ಚ**
**ತಂ ತಾದೃಶಂ ಶ್ರೀರ್ಜುಷತೇ ಸಮಗ್ರಾ ॥ ೧೧೧ ॥**

ಯಾರು ಮನುಷ್ಯರ ವಿಶ್ವಾಸವನ್ನು ಸಂಪಾದಿಸಲು ತಿಳಿದಿರುವನೋ, ತಪ್ಪಿತಸ್ಥರೆಂದು ಕಂಡು ಬಂದಲ್ಲಿ ಸರಿಯಾದ ಶಿಕ್ಷೆಯನ್ನು ನೀಡಬಲ್ಲನೋ, ಶಿಕ್ಷೆಯ ಪ್ರಮಾಣದ ಪರಿಜ್ಞಾನವನ್ನು ಹೊಂದಿರುವನೋ ಹಾಗೂ ಕ್ಷಮೆಯ ಮಹತ್ತ್ವವನ್ನೂ ಅರಿತಿರುವನೋ – ಅಂತಹವನನ್ನು ಸಮಗ್ರವಾದ ಸಂಪತ್ತೂ ಬಂದು ಸೇರುತ್ತದೆ. ॥ ೧೧೦ ॥

ಸುದುರ್ಬಲಂ ನಾವಜಾನಾತಿ ಕಂಚಿದ್
ಯುಕ್ತೋ ರಿಪುಂ ಸೇವತೇ ಬುದ್ಧಿಪೂರ್ವಮ್ ।
ನ ವಿಗ್ರಹಂ ರೋಚಯತೇ ಬಲಸ್ಥೈಃ
ಕಾಲೇ ಚ ಯೋ ವಿಕ್ರಮತೇ ಸ ಧೀರಃ ॥ ೧೧೧ ॥

ಯಾರು ಯಾವೊಬ್ಬ ದುರ್ಬಲನನ್ನೂ ಅವಮಾನಿಸುವುದಿಲ್ಲವೋ, ಸದಾ ಜಾಗರೂಕನಾಗಿದ್ದು ಶತ್ರುವಿನೊಂದಿಗೆ ಬುದ್ಧಿಪೂರ್ವಕವಾಗಿ ವ್ಯವಹರಿಸುತ್ತಿರುವನೋ, ಬಲಿಷ್ಠರ ವಿರೋಧವನ್ನು ಕಟ್ಟಿಕೊಳ್ಳುವುದಿಲ್ಲವೋ ಹಾಗೂ ಸಮಯ ಬಂದಾಗ ತನ್ನ ಪರಾಕ್ರಮವನ್ನು ತೋರಿಸುವನೋ ಅವನೇ ಧೀರನು. ॥ ೧೧೧ ॥

ಪ್ರಾಪ್ಯಾಪದಂ ನ ವ್ಯಥತೇ ಕದಾಚಿ-
ದುದ್ಯೋಗಮನ್ವಿಚ್ಛತಿ ಚಾಪ್ರಮತ್ತಃ ।
ದುಃಖಂ ಚ ಕಾಲೇ ಸಹತೇ ಮಹಾತ್ಮಾ
ಧುರಂಧರಸ್ತಸ್ಯ ಜಿತಾಃ ಸಪತ್ನಾಃ ॥ ೧೧೨ ॥

ಕಾರ್ಯಭಾರವನ್ನು ವಹಿಸಿರುವ ಯಾವ ರಾಜನು ಮಹತ್ತರವಾದ ಆಪತ್ತಿಗೊಳಗಾಗಿದ್ದರೂ ಸಹ ಅದಕ್ಕಾಗಿ ಎಂದೂ ದುಃಖಿಸುವುದಿಲ್ಲವೋ, ಯಾವನು ಸದಾ ಜಾಗರೂಕನಾಗಿದ್ದು ತಾನು ಮಾಡಬೇಕಾದ ಕರ್ತವ್ಯವನ್ನು ಮಾಡುತ್ತಿರುತ್ತಾನೆಯೋ, ಆಗಾಗ ಬಂದೆರಗುವ ದುಃಖಗಳನ್ನು ಧೈರ್ಯದಿಂದ ಸಹಿಸಿಕೊಳ್ಳುವನೋ ಅಂತಹ ಮಹಾತ್ಮನ ಶತ್ರುಗಳು ಪರಾಜಿತರಾದಂತೆಯೇ ಸರಿ. ॥ ೧೧೨ ॥

ಅನರ್ಥಕಂ ವಿಪ್ರವಾಸಂ ಗೃಹೇಭ್ಯಃ
ಪಾಪೈಃ ಸಂಧಿಂ ಪರದಾರಾಭಿಮರ್ಶಮ್ ।
ದಂಭಂ ಸ್ತೈನ್ಯಂ ಪೈಶುನಂ ಮದ್ಯಪಾನಂ
ನ ಸೇವತೇ ಯಶ್ಚ ಸುಖೀ ಸದೈವ ॥ ೧೧೩ ॥

ಯಾರು ನಿರರ್ಥಕವಾಗಿ ಮನೆಬಿಟ್ಟು ದೇಶಾಟನೆ ಮಾಡುವುದಿಲ್ಲವೋ, ಪಾಪಿಷ್ಠರ ಸಹವಾಸ ಮಾಡುವುದಿಲ್ಲವೋ, ಪರಸ್ತ್ರೀಸಂಗ ಮಾಡುವುದಿಲ್ಲವೋ,

ಅಹಂಕಾರಿಯಾಗಿರುವುದಿಲ್ಲವೋ, ಕಳ್ಳನಾಗಿರುವುದಿಲ್ಲವೋ, ಯಾವನು ಚಾಡಿಕೋರ-ನಾಗಿರುವುದಿಲ್ಲವೋ, ಯಾವನು ಮದ್ಯಪಾನ ಮಾಡುವುದಿಲ್ಲವೋ - ಅಂತಹವನು ಸರ್ವದಾ ಸುಖಿಯಾಗಿರುತ್ತಾನೆ. ॥ ೧೧೩ ॥

**ನ ಸಂರಂಭೇಣಾರಭತೇ ತ್ರಿವರ್ಗ-**
**ಮಾಕಾರಿತಃ ಶಂಸತಿ ತತ್ತ್ವಮೇವ ।**
**ನ ಮಿತ್ರಾರ್ಥೇ ರೋಚಯತೇ ವಿವಾದಂ**
**ನಾಪೂಜಿತಃ ಕುಪ್ಯತಿ ಚಾಪ್ಯಮೂಢಃ ॥ ೧೧೪ ॥**
**ನ ಯೋಽಭ್ಯಸೂಯತ್ಯನುಕಂಪತೇ ಚ**
**ನ ದುರ್ಬಲಃ ಪ್ರಾತಿಭಾವ್ಯಂ ಕರೋತಿ ।**
**ನಾತ್ಯಾಹ ಕಿಂಚಿತ್‌ಕ್ಷಮತೇ ವಿವಾದಂ**
**ಸರ್ವತ್ರ ತಾದೃಗ್ ಲಭತೇ ಪ್ರಶಂಸಾಮ್ ॥ ೧೧೫ ॥**

ಯಾವನು ಧರ್ಮ, ಅರ್ಥ ಮತ್ತು ಕಾಮಗಳಿಗೆ ಸಂಬಂಧಿಸಿದ ಕಾರ್ಯಗಳನ್ನು ಅವಸರದಿಂದ ಆರಂಭಿಸುವುದಿಲ್ಲವೋ, ಕೇಳಿದಲ್ಲಿ ಯಥಾರ್ಥವಾದ ಮಾತುಗಳನ್ನೇ ಆಡುತ್ತಾನೆಯೋ, ಸ್ನೇಹಿತರಿಗಾಗಿಯೂ ಎಂದೂ ವಿವಾದ ಮಾಡಲು ಬಯಸುವುದಿಲ್ಲವೋ, ಗೌರವಿಸಲ್ಪಡದಿದ್ದರೂ ಯಾವನು ಕೋಪಗೊಳ್ಳುವುದಿಲ್ಲವೋ, ಇತರರ ವಿಷಯದಲ್ಲಿ ಅಸೂಯೆಪಡುವುದಿಲ್ಲವೋ, ಎಲ್ಲರ ಬಗ್ಗೆಯೂ ಕನಿಕರದಿಂದ ಕೂಡಿದವನಾಗಿರುತ್ತಾನೆಯೋ, ಯಾರು ದುರ್ಬಲನಾಗಿದ್ದು ಇತರರ ವಿರೋಧವನ್ನು ಕಟ್ಟಿಕೊಳ್ಳುವುದಿಲ್ಲವೋ, ಎಂದೂ ವಿಷಯವನ್ನತಿಕ್ರಮಿಸಿ ಮಾತನಾಡುವುದಿಲ್ಲವೋ, ವಿವಾದವನ್ನು ಸಹಿಸಿಕೊಳ್ಳುತ್ತಾನೆಯೋ ಅಂತಹವನು ಎಲ್ಲೆಡೆಯೂ ಪ್ರಶಂಸೆಗೆ ಪಾತ್ರನಾಗುತ್ತಾನೆ. ॥ ೧೧೪, ೧೧೫ ॥

**ಯೋ ನೋದ್ಧತಂ ಕುರುತೇ ಜಾತು ವೇಷಂ**
**ನ ಪೌರುಷೇಣಾಪಿ ವಿಕತ್ಥತೇಽನ್ಯಾನ್ ।**
**ನ ಮೂರ್ಚ್ಛಿತಃ ಕಟುಕಾನ್ಯಾಹ ಕಿಂಚಿತ್**
**ಪ್ರಿಯಂ ಸದಾ ತಂ ಕುರುತೇ ಜನೋ ಹಿ ॥ ೧೧೬ ॥**

ಯಾವನು ಉದ್ಧಟತನವನ್ನು ಎಂದೂ ಪ್ರದರ್ಶಿಸುವುದಿಲ್ಲವೋ, ಇತರರ ಮುಂದೆ ತನ್ನ ಪರಾಕ್ರಮದ ಶ್ಲಾಘನೆಯನ್ನು ಯಾರು ಮಾಡಿಕೊಳ್ಳುವುದಿಲ್ಲವೋ, ಕೋಪದಿಂದ ವ್ಯಾಕುಲನಾಗಿದ್ದರೂ ಕೂಡ ಯಾರು ಎಂದೂ ಕಟುವಾದ ಮಾತುಗಳನ್ನಾಡುವುದಿಲ್ಲವೋ ಅಂತಹವನನ್ನು ಎಲ್ಲ ಕಾಲಗಳಲ್ಲಿಯೂ ಜನರು ಪ್ರೀತಿಸುವರು. ॥ ೧೧೬ ॥

ನ ವೈರಮುದ್ದೀಪಯತಿ ಪ್ರಶಾಂತಂ
ನ ದರ್ಪಮಾರೋಹತಿ ನಾಸ್ತಮೇತಿ ।
ನ ದುರ್ಗತೋಽಸ್ಮೀತಿ ಕರೋತ್ಯಕಾರ್ಯಂ
ತಮಾರ್ಯಶೀಲಂ ಪರಮಾಹುರಾರ್ಯಾ: ॥ ೧೧೭ ॥

ಶಾಂತವಾಗಿರುವ ವೈರಾಗ್ನಿಯನ್ನು ಯಾರು ಉದ್ದೀಪನಗೊಳಿಸುವುದಿಲ್ಲವೋ, ಯಾವನು ಬಹು ದರ್ಪಿಷ್ಠನಾಗಿಯಾಗಲೀ ಅಥವಾ ಬಹುದೀನತೆಯಿಂದ ಕೂಡಿದವನಾಗಿಯಾಗಲೀ ಇರುವುದಿಲ್ಲವೋ ಹಾಗೂ 'ನಾನು ವಿಪತ್ತಿನಲ್ಲಿರುವೆ ' ಎಂದು ಭಾವಿಸಿ ಯಾರು ಅನುಚಿತ ಕಾರ್ಯಗಳಲ್ಲಿ ತೊಡಗುವುದಿಲ್ಲವೋ ಅಂತಹ ಉತ್ತಮವಾದ ಆಚರಣೆಯುಳ್ಳ ಪುರುಷನನ್ನು ಶ್ರೇಷ್ಠಪುರುಷನೆಂದು ಆರ್ಯರು ಹೇಳುತ್ತಾರೆ. ॥ ೧೧೭ ॥

ನ ಸ್ವೇ ಸುಖೇ ವೈ ಕುರುತೇ ಪ್ರಹರ್ಷಂ
ನಾನ್ಯಸ್ಯ ದುಃಖೇ ಭವತಿ ಪ್ರಹೃಷ್ಟಃ ।
ದತ್ತ್ವಾ ನ ಪಶ್ಚಾತ್‌ಕುರುತೇಽನುತಾಪಂ
ಸ ಕಥ್ಯತೇ ಸತ್ಪುರುಷಾರ್ಯಶೀಲಃ ॥ ೧೧೮ ॥

ಯಾವನು ತನ್ನ ಸುಖದ ವಿಷಯವಾಗಿ ಹೆಚ್ಚು ಸಂತೋಷಗೊಳ್ಳುವುದಿಲ್ಲವೋ, ಬೇರೆಯವರ ದುಃಖವನ್ನು ಕಂಡು ಹರ್ಷಿತನಾಗುವುದಿಲ್ಲವೋ, ಏನನ್ನಾದರೂ ದಾನಮಾಡಿದ ನಂತರ ಅದರ ಬಗ್ಗೆ ಪಶ್ಚಾತ್ತಾಪ ಪಡುವುದಿಲ್ಲವೋ - ಅಂತಹವನು ಸತ್ಪುರುಷನೆಂದೂ - ಆರ್ಯಗುಣ ಶೀಲಗಳುಳ್ಳವನೆಂದೂ ಪರಿಗಣಿತನಾಗುತ್ತಾನೆ. ॥ ೧೧೮ ॥

ದೇಶಾಚಾರಾನ್ ಸಮಯಾಂಜಾತಿಧರ್ಮಾನ್
ಬುಭೂಷತೇ ಯಃ ಸ ಪರಾವರಜ್ಞಃ ।
ಸ ಯತ್ರ ತತ್ರಾಭಿಗತಃ ಸದೈವ
ಮಹಾಜನಸ್ಯಾಧಿಪತ್ಯಂ ಕರೋತಿ ॥ ೧೧೯ ॥

ಯಾವ ಮನುಷ್ಯನು ದೇಶದ ವ್ಯವಹಾರವನ್ನೂ, ಲೋಕದ ರೂಢಿ ಆಚಾರಗಳನ್ನೂ ಹಾಗೂ ವಿಭಿನ್ನ ಜಾತಿಗಳ ಧರ್ಮಗಳನ್ನೂ ಅರಿಯಲು ಬಯಸುತ್ತಾನೆಯೋ ಆತನು ಉತ್ತಮ- ಅಧಮಗಳ ಭೇದವನ್ನರಿತ ವಿವೇಕಿಯಾಗುತ್ತಾನೆ. ಯಾವಾಗಲೂ ಆತ ಹೋದಲ್ಲೆಲ್ಲ ಜನಸಮೂಹದ ಮೇಲೆ ತನ್ನ ಆಧಿಪತ್ಯವನ್ನು ಸ್ಥಾಪಿಸಬಲ್ಲವನಾಗುತ್ತಾನೆ ॥ ೧೧೯ ॥

**ದಂಭಂ ಮೋಹಂ ಮತ್ಸರಂ ಪಾಪಕೃತ್ಯಂ**
**ರಾಜದ್ವಿಷ್ಟಂ ಪೈಶುನಂ ಪೂಗವೈರಮ್ ।**
**ಮತ್ತೋನ್ಮತ್ತೈರ್ದುರ್ಜನೈಶ್ಚಾಪಿ ವಾದಂ**
**ಯಃ ಪ್ರಜ್ಞಾವಾನ್ ವರ್ಜಯೇತ್ ಸ ಪ್ರಧಾನಃ ॥ ೧೨೦ ॥**

ಪ್ರಜ್ಞಾವಂತನಾದ ಯಾವ ಮನುಷ್ಯನು ಅಹಂಕಾರವನ್ನೂ, ಮೋಹವನ್ನೂ, ಅಸೂಯೆಯನ್ನೂ, ಕೆಟ್ಟಕೆಲಸವನ್ನೂ, ರಾಜದ್ರೋಹವನ್ನೂ, ಚಾಡಿಕೋರತನವನ್ನೂ, ಸಮೂಹದೊಂದಿಗೆ ದ್ವೇಷವನ್ನೂ ಹಾಗೂ (ಕುಡಿದು) ಮತ್ತನಾದವನೊಡನೆ, ಹುಚ್ಚನೊಡನೆ ಹಾಗೂ ಕೆಟ್ಟ ಮನುಷ್ಯನೊಂದಿಗೆ ವಾದವನ್ನೂ ವರ್ಜಿಸುತ್ತಾನೆಯೋ ಆತನು ಶ್ರೇಷ್ಠನು. ॥ ೧೨೦ ॥

**ದಾನಂ ಹೋಮಂ ದೈವತಂ ಮಂಗಲಾನಿ**
**ಪ್ರಾಯಶ್ಚಿತ್ತಾನ್ ವಿವಿಧಾಂಲ್ಲೋಕವಾದಾನ್ ।**
**ಏತಾನಿ ಯಃ ಕುರುತೇ ನೈತ್ಯಕಾನಿ**
**ತಸ್ಯೋತ್ಥಾನಂ ದೇವತಾ ರಾಧಯಂತಿ ॥ ೧೨೧ ॥**

ದಾನ, ಔಪಾಸನಾದಿಗಳು, ದೇವಪೂಜನ, ಮಂಗಳಕಾರ್ಯಗಳು, ವಿವಿಧ-ಪ್ರಾಯಶ್ಚಿತ್ತಗಳು, ಅನೇಕ ಪ್ರಕಾರವಾದ ಲೌಕಿಕಾಚಾರ ವ್ಯವಹಾರಗಳು - ಈ ನಿತ್ಯಕರ್ಮಗಳನ್ನು ಯಾವಾತನು ತಪ್ಪದೇ ಮಾಡುವನೋ ಅಂತಹವನಿಗೆ ದೇವತೆಗಳು ಅಭ್ಯುದಯವನ್ನುಂಟು ಮಾಡುತ್ತಾರೆ. ॥ ೧೨೧ ॥

**ಸಮೈರ್ವಿವಾಹಂ ಕುರುತೇ ನ ಹೀನೈಃ**
**ಸಮೈಃ ಸಖ್ಯಂ ವ್ಯವಹಾರಂ ಕಥಾಂ ಚ ।**
**ಗುಣೈರ್ವಿಶಿಷ್ಟಾಂಶ್ಚ ಪುರೋ ದಧಾತಿ**
**ವಿಪಶ್ಚಿತಸ್ತಸ್ಯ ನಯಾಃ ಸುನೀತಾಃ ॥ ೧೨೨ ॥**

ಯಾವನು ತನಗೆ ಸಮಾನರಾದವರಲ್ಲಿ ಮಾತ್ರವೇ ವಿವಾಹಸಂಬಂಧವನ್ನು ಬೆಳೆಸುತ್ತಾನೆಯೋ, ಎಂದೂ ಹೀನರೊಡನೆ ಬೆಳೆಸುವುದಿಲ್ಲವೋ, ತನಗೆ ಸಮಾನರಾದವರಲ್ಲಿ ಮಾತ್ರವೇ ಸಖ್ಯವನ್ನೂ ವ್ಯವಹಾರವನ್ನೂ ಹಾಗೂ ಮಾತುಕತೆಗಳನ್ನೂ ಇಟ್ಟುಕೊಂಡಿರುವನೋ, ಗುಣಗಳಿಂದ ಶ್ರೇಷ್ಠರಾದವರನ್ನು ಮುಂದಿಟ್ಟುಕೊಳ್ಳುತ್ತಾನೆಯೋ ಅಂತಹ ವಿದ್ವಾಂಸನ ರೀತಿ - ನೀತಿಗಳು ಶ್ರೇಷ್ಠವಾದವುಗಳೆಂದು ಪರಿಗಣಿಸಲ್ಪಡುತ್ತವೆ. ॥ ೧೨೨ ॥

**ಮಿತಂ ಭುಂಕ್ತೇ ಸಂವಿಭಜ್ಯಾಶ್ರಿತೇಭ್ಯೋ**
**ಮಿತಂ ಸ್ವಪಿತ್ಯಮಿತಂ ಕರ್ಮ ಕೃತ್ವಾ।**
**ದದಾತ್ಯಮಿತ್ರೇಷ್ವಪಿ ಯಾಚಿತಃ ಸನ್**
**ತಮಾತ್ಮವಂತಂ ಪ್ರಜಹತ್ಯನರ್ಥಾಃ ॥ ೧೨೩ ॥**

ಯಾವನು ತನ್ನನ್ನು ಆಶ್ರಯಿಸುವವರಿಗೆ ಕೊಟ್ಟು ಮಿತವಾಗಿ ಉಣ್ಣುವನೋ, ಹೆಚ್ಚು ಕೆಲಸಮಾಡಿ ಸ್ವಲ್ಪಕಾಲ ಮಾತ್ರ ಮಲಗುವನೋ, ಯಾಚನೆ ಮಾಡುವವನು ಮಿತ್ರನಲ್ಲದಿದ್ದರೂ ದಾನ ಮಾಡುತ್ತಾನೆಯೋ ಅಂತಹ ಮನನಶೀಲನಾದ ಪುರುಷನಿಂದ ಸಕಲವಿಧವಾದ ಅನರ್ಥಗಳೂ ದೂರಸರಿಯುತ್ತವೆ. ॥ ೧೨೩ ॥

**ಚಿಕೀರ್ಷಿತಂ ವಿಪ್ರಕೃತಂ ಚ ಯಸ್ಯ**
**ನಾನ್ಯೇ ಜನಾಃ ಕರ್ಮ ಜಾನಂತಿ ಕಿಂಚಿತ್ ।**
**ಮಂತ್ರೇ ಗುಪ್ತೇ ಸಮ್ಯಗನುಷ್ಠಿತೇ ಚ**
**ನಾಲ್ಪೋಽಪ್ಯಸ್ಯ ಚ್ಯವತೇ ಕಶ್ಚಿದರ್ಥಃ ॥ ೧೨೪ ॥**

ಯಾವನ ಅಭೀಷ್ಟ ಕಾರ್ಯಗಳಾಗಲಿ ಹಾಗೂ ಬೇರೆಯವರ ಇಚ್ಛೆಗೆ ವಿರುದ್ಧವಾದ ಕಾರ್ಯಗಳಾಗಲೀ ಬೇರೆ ಜನರು ತಿಳಿಯಲಾರರೋ, ಯಾವನ ಸಮಾಲೋಚನೆ ಹಾಗೂ ಅನುಷ್ಠಾನಗಳು ಗೋಪ್ಯವಾಗಿಯೇ ಇರುತ್ತವೆಯೋ ಅಂತಹವನು ಮಾಡುವ ಅತ್ಯಲ್ಪಕಾರ್ಯವೂ ಸಹ ನಿಷ್ಫಲವಾಗುವುದಿಲ್ಲ. ॥ ೧೨೪ ॥

**ಯಃ ಸರ್ವಭೂತಪ್ರಶಮೇ ನಿವಿಷ್ಟಃ**
**ಸತ್ಯೋ ಮೃದುರ್ಮಾನಕೃಚ್ಛುದ್ಧಭಾವಃ ।**
**ಅತೀವ ಸ ಜ್ಞಾಯತೇ ಜ್ಞಾತಿಮಧ್ಯೇ**
**ಮಹಾಮಣಿರ್ಜಾತ್ಯ ಇವ ಪ್ರಸನ್ನಃ ॥ ೧೨೫ ॥**

ಯಾವನು ಸಕಲಪ್ರಾಣಿಗಳ ಶಾಂತಿಯಲ್ಲಿ ತತ್ಪರನಾಗಿರುವನೋ, ಸತ್ಯಸಂಧನೋ, ಮೃದುಸ್ವಭಾವದವನೋ, ಬೇರೆಯವರನ್ನು ಆದರಿಸುವನೋ, ಶುದ್ಧವಾದ ಅಂತರಂಗವನ್ನುಳ್ಳವನೋ - ಅಂತಹವನು ಅಮೋಘವಾದ ಜಾತಿರತ್ನದಂತೆ - ತನ್ನ ಜ್ಞಾತಿ- ಬಾಂಧವರಲ್ಲಿ ಪ್ರಸಿದ್ಧಿಯನ್ನು ಹೊಂದುತ್ತಾನೆ. ॥ ೧೨೫ ॥

**ಯ ಆತ್ಮನಾಪತ್ರಪತೇ ಭೃಶಂ ನರಃ**
**ಸ ಸರ್ವಲೋಕಸ್ಯ ಗುರುರ್ಭವತ್ಯುತ ।**
**ಅನಂತತೇಜಾಃ ಸುಮನಾಃ ಸಮಾಹಿತಃ**
**ಸ ತೇಜಸಾ ಸೂರ್ಯ ಇವಾವಭಾಸತೇ ॥ ೧೨೬ ॥**

ಯಾವಾತನು ತಾನು ಮಾಡಿದ ಕೃತ್ಯದ ಬಗ್ಗೆ ತನ್ನೊಳಗೇ ಬಹುವಾಗಿ ನಾಚಿಕೊಳ್ಳುವನೋ (ಅದು ಇನ್ನೊಬ್ಬರಿಗೆ ತಿಳಿಯದಿದ್ದರೂ ಕೂಡಾ) ಆತ ಜಗತ್ತಿಗೇ ಗುರುವಾಗಬಲ್ಲ. ಆತ ತನ್ನ ಅನಂತ ತೇಜಸ್ಸಿನಿಂದಾಗಿ, ಶುದ್ಧಹೃದಯದಿಂದಾಗಿ ಹಾಗೂ ಏಕಾಗ್ರತೆಯಿಂದ ಕೂಡಿದವನಾಗಿ ಸೂರ್ಯನಿಗೆ ಸಮನಾದ ಕಾಂತಿಯುಳ್ಳವನಾಗಿ ಕಾಣುತ್ತಾನೆ. ॥ ೧೨೬ ॥

**ವನೇ ಜಾತಾಃ ಶಾಪದಗ್ಧಸ್ಯ ರಾಜ್ಞಃ**
**ಪಾಂಡೋಃ ಪುತ್ರಾಃ ಪಂಚ ಪಂಚೇಂದ್ರಕಲ್ಪಾಃ ।**
**ತ್ವಯ್ಯೈವ ಬಾಲಾ ವರ್ಧಿತಾಃ ಶಿಕ್ಷಿತಾಶ್ಚ**
**ತವಾದೇಶಂ ಪಾಲಯಂತ್ಯಾಂಬಿಕೇಯ ॥ ೧೨೭ ॥**

ಅಂಬಿಕಾತನಯ! ಶಾಪಗ್ರಸ್ತನಾಗಿದ್ದ ಪಾಂಡುರಾಜನಿಗೆ ಅರಣ್ಯದಲ್ಲಿ ಪಂಚೇಂದ್ರಕಲ್ಪರಾದ ಪಂಚಪಾಂಡವರು ದೇವತೆಗಳ ಅನುಗ್ರಹದಿಂದಲೇ ಜನಿಸಿದರು. ಆ ಬಾಲಕರು ನಿನ್ನಿಂದಲೇ ಬೆಳೆಸಲ್ಪಟ್ಟರೂ, ಸುಶಿಕ್ಷಿತರೂ ಆದರು. ಅವರು ನಿನ್ನ ಆದೇಶವನ್ನು ಪಾಲಿಸುತ್ತಾರೆ. ॥ ೧೨೭ ॥

**ಪ್ರದಾಯ್ಯೈಷಾಮುಚಿತಂ ತಾತ ರಾಜ್ಯಂ**
**ಸುಖೀ ಪುತ್ರೈಃ ಸಹಿತೋ ಮೋದಮಾನಃ ।**
**ನ ದೇವಾನಾಂ ನಾಪಿ ಚ ಮನುಷ್ಯಾಣಾಂ**
**ಭವಿಷ್ಯಸಿ ತ್ವಂ ತರ್ಕಣೀಯೋ ನರೇಂದ್ರ ॥ ೧೨೮ ॥**

ನರೇಂದ್ರ ! ಪಾಂಡವರಿಗೆ ನೀನು ನ್ಯಾಯೋಚಿತವಾದ ಅವರ ರಾಜ್ಯವನ್ನು ಬಿಟ್ಟುಕೊಟ್ಟು ಮಕ್ಕಳಿಂದ ಕೂಡಿ ಆನಂದವನ್ನನುಭವಿಸಿಕೊಂಡು ಸುಖವಾಗಿರು. ಹೀಗೆ ಮಾಡಿದಲ್ಲಿ ನೀನು ಮನುಷ್ಯರಲ್ಲಿಯೇ ಆಗಲಿ, ದೇವತೆಗಳಲ್ಲಿಯೇ ಆಗಲಿ (ಕುತ್ಸಿತವಾದ) ತರ್ಕಕ್ಕೆ ವಿಷಯನಾಗುವುದಿಲ್ಲ. ॥ ೧೨೮ ॥

ಇತಿ ಶ್ರೀಮಹಾಭಾರತೇ ಉದ್ಯೋಗಪರ್ವಣಿ ಪ್ರಜಾಗರಪರ್ವಣಿ

ವಿದುರನೀತಿವಾಕ್ಯೇ ತ್ರಯಸ್ತ್ರಿಂಶೋಽಧ್ಯಾಯಃ ॥ ೩೩ ॥



# ಎರಡನೇ ಅಧ್ಯಾಯ

ಧೃತರಾಷ್ಟ್ರ ಉವಾಚ

ಜಾಗ್ರತೋ ದಹ್ಯಮಾನಸ್ಯ ಯತ್ ಕಾರ್ಯಮನುಪಶ್ಯಸಿ ।
ತದ್ ಬ್ರೂಹಿ ತ್ವಂ ಹಿ ನಸ್ತಾತ ಧರ್ಮಾರ್ಥಕುಶಲೋ ಹ್ಯಸಿ ॥ ೧ ॥

ಧೃತರಾಷ್ಟ್ರನು ಹೇಳಿದನು -

ತಾತ ! ನಾನು ಚಿಂತೆಯಿಂದ ತಪಿಸುತ್ತ ನಿದ್ರೆಯಿಲ್ಲದೇ ತೊಳಲಾಡುತ್ತಿರು ನಾನು ಯಾವ ಕಾರ್ಯವನ್ನು ಮಾಡುವುದು ಉಚಿತವೆಂದು ಭಾವಿಸುವೆಯೋ ಅದ ಹೇಳು. ಏಕೆಂದರೆ ನಮ್ಮಲ್ಲಿ ನೀನೇ ಧರ್ಮಾರ್ಥಕುಶಲನು. ॥ ೧ ॥

ತ್ವಂ ಮಾಂ ಯಥಾವದ್ ವಿದುರ ಪ್ರಶಾಧಿ
ಪ್ರಜ್ಞಾಪೂರ್ವಂ ಸರ್ವಮಜಾತಶತ್ರೋಃ ।
ಯನ್ಮನ್ಯಸೇ ಪಥ್ಯಮದೀನಸತ್ತ್ವ
ಶ್ರೇಯಸ್ಕರಂ ಬ್ರೂಹಿ ತದ್ ವೈ ಕುರೂಣಾಮ್ ॥ ೨ ॥

ಹೇ ಪರಮಸಾತ್ತ್ವಿಕನೇ । ನೀನು ಸಂಪೂರ್ಣವಾಗಿ ವಿಚಾರ ಮಾಡಿ ನನ ಸರಿಯಾದ ಉಪದೇಶವನ್ನು ನೀಡು. ಯಾವುದು ಯುಧಿಷ್ಠಿರನಿಗೆ ಹಿತಕರವೆಂದ ಹಾಗೂ ಕೌರವರಿಗೆ ಶ್ರೇಯಸ್ಕರವೆಂದೂ ನೀನು ಭಾವಿಸುವೆಯೋ ಅದ ಇದ್ದಂತೆಯೇ ತಿಳಿಸಿಕೊಡು. ॥ ೨ ॥

ಪಾಪಾಶಂಕೀ ಪಾಪಮೇವಾನುಪಶ್ಯನ್
ಪೃಚ್ಛಾಮಿ ತ್ವಾಂ ವ್ಯಾಕುಲೇನಾತ್ಮನಾಹಮ್ ।
ಕವೇ ತನ್ಮೇ ಬ್ರೂಹಿ ಸರ್ವಂ ಯಥಾವ-
ನ್ಮನೀಷಿತಂ ಸರ್ವಮಜಾತಶತ್ರೋಃ ॥ ೩ ॥

ನನ್ನ ಮನಸ್ಸಿನಲ್ಲಿ ಅನಿಷ್ಟದ ಭೀತಿ ತುಂಬಿದೆ. ಹಾಗಾಗಿ ನಾನು ಎಲ್ಲೆಡೆಯ ಅನಿಷ್ಟವನ್ನು ಕಾಣುತ್ತಿರುವೆ. ವ್ಯಾಕುಲ ಹೃದಯದಿಂದ ನಾನು ನಿನ್ನನ್ನು ಕೇಳುತ್ತಿರು ವಿದ್ವಾಂಸನೇ ! ಎಲ್ಲ ವಿಷಯಗಳನ್ನೂ ನನಗೆ ಯಥಾವತ್ತಾಗಿ ಹೇಳು. ಯುಧಿಷ್ಠಿರ ಮನದ ಅಭಿಲಾಷೆ ಏನೆಂಬುದನ್ನು ಖಚಿತವಾಗಿ ತಿಳಿಯಪಡಿಸು. ॥ ೩ ॥

ವಿದುರ ಉವಾಚ

ಶುಭಂ ವಾ ಯದಿ ವಾ ಪಾಪಂ ದ್ವೇಷ್ಯಂ ವಾ ಯದಿ ವಾ ಪ್ರಿಯಮ್ ।
ಅಪೃಷ್ಟಸ್ತಸ್ಯ ತದ್ ಬ್ರೂಯಾದ್ ಯಸ್ಯ ನೇಚ್ಛೇತ್ಪರಾಭವಮ್ ॥ ೪ ॥

ವಿದುರನು ಹೇಳಿದನು - 'ಯಾವನು ಮಿತ್ರನೊಬ್ಬನ ಪರಾಭವವನ್ನು ಬಯಸುವುದಿಲ್ಲವೋ ಅವನು, ಮಿತ್ರನಿಂದ ಕೇಳಲ್ಪಡದಿದ್ದರೂ ಕೂಡಾ ಹೇಳಬೇಕಾದುದು ಕಲ್ಯಾಣಕರವಾದದ್ದಿರಲಿ, ಅದು ಅನಿಷ್ಟವಾದದ್ದಿರಲಿ, ಒಳ್ಳೆಯದಿರಲಿ, ಕೆಟ್ಟದ್ದಿರಲಿ - ಯಾವ ಮಾತೇ ಆಗಿದ್ದರೂ, ಹೇಳಲೇಬೇಕು. ॥ ೪ ॥

**ತಸ್ಮಾದ್ ವಕ್ಷ್ಯಾಮಿ ತೇ ರಾಜನ್ ಹಿತಂ ಯತ್ಸ್ಯಾತ್ ಕುರೂನ್ಪ್ರತಿ ।**
**ವಚಃ ಶ್ರೇಯಸ್ಕರಂ ಧರ್ಮ್ಯಂ ಬ್ರುವತಸ್ತನ್ನಿಬೋಧ ಮೇ ॥ ೫ ॥**

ಆದ್ದರಿಂದಲೇ ರಾಜನೇ! ಯಾವುದರಿಂದ ಸಮಸ್ತ ಕೌರವರಿಗೂ ಹಿತವುಂಟಾಗು-ತ್ತದೆಯೋ, ಆ ಮಾತನ್ನು ನಿನಗೆ ಹೇಳಲಿರುವೆ. ನಾನು ಹೇಳಲಿರುವ ಶ್ರೇಯಸ್ಕರವಾದ ಧರ್ಮಯುಕ್ತವಾದ ಮಾತುಗಳನ್ನು ನೀನು ಏಕಾಗ್ರಚಿತ್ತನಾಗಿ ಕೇಳು. ॥ ೫ ॥

**ಮಿಥ್ಯೋಪೇತಾನಿ ಕರ್ಮಾಣಿ ಸಿಧ್ಯೇಯುರ್ಯಾನಿ ಭಾರತ ।**
**ಅನುಪಾಯಪ್ರಯುಕ್ತಾನಿ ಮಾ ಸ್ಮ ತೇಷು ಮನಃ ಕೃಥಾಃ ॥ ೬ ॥**

ಮೋಸದಿಂದ ಕೂಡಿದ (ದ್ಯೂತಾದಿಗಳಿಂದ) ಮತ್ತು ರಾಜರು ಪ್ರಯೋಗಿಸಲು ಯೋಗ್ಯವಲ್ಲದ ಉಪಾಯಗಳಿಂದ ಯಾವ ಕಾರ್ಯಗಳು ಸಿದ್ಧಿಸುವುವೋ ಅಂತಹ ಕಾರ್ಯಗಳಲ್ಲಿ ನಿನ್ನ ಮನಸ್ಸು ಪ್ರವರ್ತಿಸದಿರಲಿ. ॥ ೬ ॥

**ತಥೈವ ಯೋಗವಿಹಿತಂ ಯತ್ತು ಕರ್ಮ ನ ಸಿಧ್ಯತಿ ।**
**ಉಪಾಯಯುಕ್ತಂ ಮೇಧಾವೀ ನ ತತ್ರ ಗ್ಲಪಯೇನ್ಮನಃ ॥ ೭ ॥**

ಅದೇ ರೀತಿ ಯೋಗ್ಯವಾದ ಮತ್ತು ಸದುಪಾಯಗಳಿಂದ ಕೂಡಿದ ಮಾರ್ಗ-ವನ್ನನುಸರಿಸಿಯೂ ಕಾರ್ಯದ ಸಿದ್ಧಿಯಾಗದಿದ್ದರೆ ಮೇಧಾವಿಯಾದವನು ಅದಕ್ಕಾಗಿ ಚಿಂತಿಸಬಾರದು. ॥ ೭ ॥

**ಅನುಬಂಧಾನಪೇಕ್ಷೇತ ಸಾನುಬಂಧೇಷು ಕರ್ಮಸು ।**
**ಸಂಪ್ರಧಾರ್ಯ ಚ ಕುರ್ವೀತ ವೇಗೇನ ನ ಸಮಾಚರೇತ್ ॥ ೮ ॥**

ಯಾವುದೇ ಪ್ರಯೋಜನಕ್ಕಾಗಿ ಮಾಡಲ್ಪಡುವ ಕಾರ್ಯದಲ್ಲಿ ಮೊದಲು ಪ್ರಯೋಜನದ ಬಗ್ಗೆ ಸರಿಯಾಗಿ ತಿಳಿಯಬೇಕು. ಸಾವಧಾನವಾಗಿ ವಿವೇಚಿಸಿ ಕಾರ್ಯವನ್ನು ಮಾಡಬೇಕು. ಅವಸರದಿಂದ ಎಂದೂ ಮಾಡಬಾರದು. ॥ ೮ ॥

**ಅನುಬಂಧಂ ಚ ಸಂಪ್ರೇಕ್ಷ್ಯ ವಿಪಾಕಂ ಚೈವ ಕರ್ಮಣಾಮ್ ।**
**ಉತ್ಥಾನಮಾತ್ಮನಶ್ಚೈವ ಧೀರಃ ಕುರ್ವೀತ ವಾ ನ ವಾ ॥ ೯ ॥**

ಧೀರನಾದವನು ಮೊದಲು ಕಾರ್ಯದ ಪ್ರಯೋಜನ, ಪರಿಣಾಮ ಹಾಗೂ

ಆದರಿಂದಾಗಿ ತನ್ನ ಔನ್ನತ್ಯ (ಉದ್ಧಾರ) ಸಾಧ್ಯವೇ ಎಂಬುದನ್ನೆಲ್ಲ ಚೆನ ಸಮಾಲೋಚಿಸಿ ನಂತರ ಕಾರ್ಯವನ್ನು ಕೈಗೊಳ್ಳಬೇಕು ಅಥವಾ ಬಿಡಬೇಕು. ॥ ೯ ॥

**ಯಃ ಪ್ರಮಾಣಂ ನ ಜಾನಾತಿ ಸ್ಥಾನೇ ವೃದ್ಧೌ ತಥಾ ಕ್ಷಯೇ।**
**ಕೋಶೇ ಜನಪದೇ ದಂಡೇ ನ ಸ ರಾಜ್ಯೇಽವತಿಷ್ಠತೇ ॥ ೧೦ ।**

ಯಾವ ರಾಜನು ಸ್ಥಿತಿ, ಲಾಭ, ಹಾನಿ, ಕೋಶ, ದೇಶ ಹಾಗೂ ದಂಡ ಇತ್ಯಾದಿ ಪ್ರಮಾಣವನ್ನು ತಿಳಿದಿಲ್ಲವೋ, ಆತನು ರಾಜನಾಗಿ ಹೆಚ್ಚುಕಾಲ ಉಳಿಯಲಾರ. ॥ ೧೦

**ಯಸ್ತ್ವೇತಾನಿ ಪ್ರಮಾಣಾನಿ ಯಥೋಕ್ತಾನ್ಯನುಪಶ್ಯತಿ।**
**ಯುಕ್ತೋ ಧರ್ಮಾರ್ಥಯೋರ್ಜ್ಞಾನೇ ಸ ರಾಜ್ಯಮಧಿಗಚ್ಛತಿ ॥ ೧೧ ।**

ಯಾರು ಈ ಪ್ರಮಾಣಗಳ ಬಗ್ಗೆ ಶಾಸ್ತ್ರಗಳಲ್ಲಿ ಹೇಳಿರುವಂತೆ ಸರಿಯಾ ರೀತಿಯಲ್ಲಿ ಅರಿತಿರುವನೋ ಹಾಗೂ ಧರ್ಮಾರ್ಥಗಳ ಬಗ್ಗೆ ವಿಶೇಷವಾದ ಜ್ಞಾನವ ಪಡೆದಿರುವನೋ ಅವನು ರಾಜ್ಯವನ್ನು ಹೊಂದುತ್ತಾನೆ. ॥ ೧೧ ॥

**ನ ರಾಜ್ಯಂ ಪ್ರಾಪ್ತಮಿತ್ಯೇವ ವರ್ತಿತವ್ಯಮಸಾಂಪ್ರತಮ್।**
**ಶ್ರಿಯಂ ಹ್ಯವಿನಯೋ ಹಂತಿ ಜರಾ ರೂಪಮಿವೋತ್ತಮಮ್ ॥ ೧೨ ।**

'ರಾಜ್ಯವು ಲಭಿಸಿಯೇ ಬಿಟ್ಟಿದೆ' ಎಂದು ಭಾವಿಸಿ ಅನುಚಿತವಾ ವರ್ತಿಸಬಾರದು. ಮುಪ್ಪು ರೂಪವನ್ನು ಅಪಹರಿಸುವಂತೆ ಉದ್ದಂಡತೆಯು ಸಂಪತ್ತ ಅಪಹರಿಸಿ ಬಿಡುತ್ತದೆ. ॥ ೧೨ ॥

**ಭಕ್ಷ್ಯೋತ್ತಮಪ್ರತಿಚ್ಛನ್ನಂ ಮತ್ಸ್ಯೋ ಬಡಿಶಮಾಯಸಮ್।**
**ಲೋಭಾಭಿಪಾತೀ ಗ್ರಸತೇ ನಾನುಬಂಧಮವೇಕ್ಷತೇ ॥ ೧೩ ।**

ಮೀನು, ಭಕ್ಷ್ಯಕ್ಕೆ ಆಸೆಪಟ್ಟು ಆಹಾರದಲ್ಲಿರುವ ಲೋಹದ ಮುಳ್ಳನ್ನು ಲೋಭದಿಂ ನುಂಗುತ್ತದೆ. ಆದರಿಂದಾಗುವ ಪರಿಣಾಮದ ಬಗ್ಗೆ ಚಿಂತಿಸುವುದಿಲ್ಲ. ॥ ೧೩ ॥

**ಯಚ್ಛಕ್ಯಂ ಗ್ರಸಿತುಂ ಗ್ರಸ್ಯಂ ಗ್ರಸ್ತಂ ಪರಿಣಮೇಚ್ಚ ಯತ್।**
**ಹಿತಂ ಚ ಪರಿಣಾಮೇ ಯತ್ ತದಾದ್ಯಂ ಭೂತಿಮಿಚ್ಛತಾ ॥ ೧೪ ।**

ಯಾವುದು ತಿನ್ನಲು ಯೋಗ್ಯವೋ, ಯಾವುದನ್ನು ತಿನ್ನಲು ಸಾಧ್ಯವಿದ್ದು ಅರಗಿಸಿಕೊಳ್ಳ ಬಹುದಾಗಿದೆಯೋ, ಅಂತೆಯೇ ಯಾವುದರ ಪರಿಣಾಮವು ಶರೀರ ಹಿತವಾಗಿರುತ್ತದೆಯೋ ಅಂತಹ ಪದಾರ್ಥವನ್ನೇ ಶ್ರೇಯಸ್ಕಾಮನಾದವ ತಿನ್ನಬೇಕು. ॥ ೧೪ ॥

**ವನಸ್ಪತೇರಪಕ್ವಾನಿ ಫಲಾನಿ ಪ್ರಚಿನೋತಿ ಯಃ ।**
**ಸ ನಾಪ್ನೋತಿ ರಸಂ ತೇಭ್ಯೋ ಬೀಜಂ ಚಾಸ್ಯ ವಿನಶ್ಯತಿ ॥ ೧೫ ॥**

ಯಾರು ವೃಕ್ಷಗಳಿಂದ ಅಪಕ್ವವಾದ ಕಾಯಿಗಳನ್ನು ಕೀಳುವನೋ, ಅವನು ಅದರಿಂದ ಫಲರಸವನ್ನಂತೂ ಪಡೆಯುವುದಿಲ್ಲ, ಬದಲಾಗಿ ಅದರ ಬೀಜಗಳೂ ನಷ್ಟವಾಗುತ್ತವೆ. ॥ ೧೫ ॥

**ಯಸ್ತು ಪಕ್ವಮುಪಾದತ್ತೇ ಕಾಲೇ ಪರಿಣತಂ ಫಲಮ್ ।**
**ಕಾಲಾದ್ ರಸಂ ಸ ಲಭತೇ ಬೀಜಾಚ್ಚೈವ ಫಲಂ ಪುನಃ ॥ ೧೬ ॥**

ಯಾವಾತನು ಪರಿಪಕ್ವವಾದ ಹಣ್ಣನ್ನು ಕೀಳುತ್ತಾನೆಯೋ ಅವನು ಹಣ್ಣಿನ ರಸಾಸ್ವಾದನೆಯನ್ನು ಮಾಡುವುದು ಮಾತ್ರವಲ್ಲದೇ ಅವುಗಳ ಬೀಜಗಳಿಂದ ಪುನಃ ಹಣ್ಣನ್ನೂ ಪಡೆಯುತ್ತಾನೆ. ॥ ೧೬ ॥

**ಯಥಾ ಮಧು ಸಮಾದತ್ತೇ ರಕ್ಷನ್ ಪುಷ್ಪಾಣಿ ಷಟ್‌ಪದಃ ।**
**ತದ್ವದರ್ಥಾನ್ಮನುಷ್ಯೇಭ್ಯ ಆದದ್ಯಾದವಿಹಿಂಸಯಾ ॥ ೧೭ ॥**

ದುಂಬಿಯು ಹೂವುಗಳಿಗೆ ಯಾವುದೇ ತೊಂದರೆಯಾಗದಂತೆ ಹೇಗೆ ಮಧುವನ್ನು ಹೀರಿಕೊಳ್ಳುತ್ತದೆಯೋ ಹಾಗೆ ರಾಜನಾದವನು ಪ್ರಜೆಗಳಿಗೆ ಯಾವುದೇ ತೊಂದರೆಯಾಗದಂತೆ ಹಣವನ್ನು ಸಂಗ್ರಹಿಸಬೇಕು. ॥ ೧೭ ॥

**ಪುಷ್ಪಂ ಪುಷ್ಪಂ ವಿಚಿನ್ವೀತ ಮೂಲಚ್ಛೇದಂ ನ ಕಾರಯೇತ್ ।**
**ಮಾಲಾಕಾರ ಇವಾರಾಮೇ ನ ಯಥಾಂಗಾರಕಾರಕಃ ॥ ೧೮ ॥**

ಹೂವಾಡಿಗನು ಹೂದೋಟದಿಂದ ಒಂದೊಂದೇ ಹೂವನ್ನು ಕೀಳುತ್ತಾನೆ. ಎಂದೂ ಗಿಡವನ್ನೇ ಕಿತ್ತು ನೋವುಂಟುಮಾಡುವುದಿಲ್ಲ. ಅದರಂತೆ ರಾಜನೂ ಸಹ ಪ್ರಜೆಗಳಿಗೆ ತೊಂದರೆಯಾಗದಂತೆ ಆದಾಯದ ಕಿಂಚಿದ್ಭಾಗವನ್ನು ಪಡೆಯಬೇಕು. ವೃಕ್ಷಗಳನ್ನೇ ಬುಡಸಮೇತ ಕಿತ್ತು ಬೆಂಕಿಯನ್ನು ಹಚ್ಚಿ ಇದ್ದಿಲು ಮಾಡುವಂತೆ ಪ್ರಜೆಗಳ ಸರ್ವಸ್ವಾಪಹರಣಕ್ಕೆ ಯತ್ನಿಸಬಾರದು. ॥ ೧೮ ॥

**ಕಿನ್ನು ಮೇ ಸ್ಯಾದಿದಂ ಕೃತ್ವಾ ಕಿನ್ನು ಮೇ ಸ್ಯಾದಕುರ್ವತಃ ।**
**ಇತಿ ಕರ್ಮಾಣಿ ಸಂಚಿಂತ್ಯ ಕುರ್ಯಾದ್ ವಾ ಪುರುಷೋ ನ ವಾ ॥ ೧೯ ॥**

ಈ ಕಾರ್ಯವನ್ನು ಮಾಡುವುದರಿಂದ ಯಾವ ಲಾಭ ಉಂಟಾಗುತ್ತದೆ, ಮಾಡದಿರುವುದರಿಂದ ಆಗುವ ಹಾನಿ ಯಾವುದು ಎಂದು ಮುಂತಾಗಿ ಸಾಧಕಬಾಧಕಗಳನ್ನು ಸರಿಯಾಗಿ ಸಮಾಲೋಚಿಸಿದ ನಂತರವೇ ವ್ಯಕ್ತಿಯು ಆ ಕೆಲಸವನ್ನು ಕೈಗೊಳ್ಳಬೇಕು. ಅಥವಾ ಬಿಡಬೇಕು. ॥ ೧೯ ॥

**ಅನಾರಭ್ಯಾ ಭವಂತ್ಯರ್ಥಾಃ ಕೇಚಿನ್ನಿತ್ಯಂ ತಥಾಗತಾಃ ।**
**ಕೃತಃ ಪುರುಷಕಾರೋ ಹಿ ಭವೇದ್ ಯೇಷು ನಿರರ್ಥಕಃ ॥ ೨೦ ।**

ಕೆಲವು ಕಾರ್ಯಗಳು ವ್ಯರ್ಥವಾದವುಗಳಾಗಿರುತ್ತವೆ. ಅವುಗಳನ್ನೆಂದೂ ಸಾಧಿಸ ಸಾಧ್ಯವಾಗದು. ಆದರಿಂದ ಅವು ಆರಂಭಿಸಲು ಯೋಗ್ಯವಾಗಿರುವುದಿಲ್ಲ, ಏಕೆಂದ ಅವುಗಳಿಗಾಗಿ ಮಾಡುವ ಪುರುಷಪ್ರಯತ್ನವು ವ್ಯರ್ಥವಾಗುತ್ತದೆ. ॥ ೨೦ ॥

**ಪ್ರಸಾದೋ ನಿಷ್ಫಲೋ ಯಸ್ಯ ಕ್ರೋಧಶ್ಚಾಪಿ ನಿರರ್ಥಕಃ ।**
**ನ ತಂ ಭರ್ತಾರಮಿಚ್ಛಂತಿ ಷಂಢಂ ಪತಿಮಿವ ಸ್ತ್ರಿಯಃ ॥ ೨೧ ।**

ಹೇಗೆ ಸ್ತ್ರೀಯರು ಷಂಡನಾದವನನ್ನು ವರಿಸಲು ಇಚ್ಛಿಸುವುದಿಲ್ಲವೋ ಹಾಗೆಯೆ ಯಾರ ಅನುಗ್ರಹವು ನಿಷ್ಫಲವಾದುದೋ ಹಾಗೂ ಯಾರ ಕೋಪ ನಿರರ್ಥಕವಾದುದಾಗಿರುತ್ತದೆಯೋ ಅಂತಹ ರಾಜನನ್ನು ಒಡೆಯನೆಂದು ಒಪ್ಪ ಪ್ರಜೆಗಳು ಇಚ್ಛಿಸುವುದಿಲ್ಲ. ॥ ೨೧ ॥

**ಕಾಂಶ್ಚಿದರ್ಥಾನ್ನರಃ ಪ್ರಾಜ್ಞೋ ಲಘುಮೂಲಾನ್ಮಹಾಫಲಾನ್ ।**
**ಕ್ಷಿಪ್ರಮಾರಭತೇ ಕರ್ತುಂ ನ ವಿಘ್ನಯತಿ ತಾದೃಶಾನ್ ॥ ೨೨ ।**

ಕೆಲವು ಕಾರ್ಯಗಳು ಸ್ವಲ್ಪ ಪ್ರಯತ್ನದಿಂದಲೇ ಮಹಾಫಲಗಳ ನೀಡುವಂತಹವುಗಳಾಗಿರುತ್ತವೆ. ಬುದ್ಧಿವಂತನಾದವನು ಅಂತಹ ಕಾರ್ಯಗಳನ್ನು ಬೇ ಆರಂಭಿಸುತ್ತಾನೆ ಹಾಗೂ ಆ ರೀತಿಯ ಕಾರ್ಯಗಳಲ್ಲಿ ಆತನು ವಿಘ್ನವನ್ನುಂಟು ಮಾಡುವುದಿಲ್ಲ. ॥ ೨೨ ॥

**ಋಜು ಪಶ್ಯತಿ ಯಃ ಸರ್ವಂ ಚಕ್ಷುಷಾನುಪಿಬನ್ನಿವ ।**
**ಆಸೀನಮಪಿ ತೂಷ್ಣೀಕಮನುರಜ್ಯಂತಿ ತಂ ಪ್ರಜಾಃ ॥ ೨೩ ।**

ಯಾವ ರಾಜನು ಕರುಣಾಪೂರ್ಣವಾಗಿ ನೇರವಾದ (ಪ್ರಾಮಾಣಿಕತೆಯಿಂ ದೃಷ್ಟಿಯಿಂದ ಎಲ್ಲವನ್ನೂ ನೋಡುತ್ತಿರುತ್ತಾನೆಯೋ, ಅವನು ಮೌನವಾಗಿದ್ದರೂ ಕೂ ಪ್ರಜೆಗಳು ಅವನಲ್ಲಿ ಅನುರಾಗವನ್ನು ಹೊಂದಿದವರಾಗಿರುತ್ತಾರೆ. ॥ ೨೩ ॥

**ಸುಪುಷ್ಪಿತಃ ಸ್ಯಾದಫಲಃ ಫಲಿತಃ ಸ್ಯಾದ್ ದುರಾರುಹಃ ।**
**ಅಪಕ್ವಃ ಪಕ್ವಸಂಕಾಶೋ ನ ತು ಶೀರ್ಯೇತ ಕರ್ಹಿಚಿತ್ ॥ ೨೪ ।**

ಮರವು ತುಂಬ ಹೂವುಗಳಿಂದ ಕೂಡಿದ್ದರೂ ಹಣ್ಣಿಲ್ಲದ್ದಾಗಿರಬೇಕು. ಹ ಕೊಡುವದಾಗಿದ್ದರೂ ಹತ್ತಲು ಕಷ್ಟವಾಗಿರಬೇಕು. ಫಲಗಳು ಕಾಯಾಗಿದ್ದರೂ ಹಣ್ ತೋರುವಂತಿರಬೇಕು. ಇದೇ ರೀತಿ ರಾಜನೂ ಸದಾ ಪ್ರಸನ್ನನಾಗಿದ್ದೂ ಹೆಚ್ಚು ದ

ಮಾಡಿದರೂ ಬರಿಗೈಯವನಾಗಬಾರದು. ಕಡಿಮೆ ಶಕ್ತಿಯುಳ್ಳವನಾಗಿದ್ದರೂ ಶಕ್ತಿಸಂಪನ್ನನಂತೆ ತೋರಿಸಿಕೊಳ್ಳಬೇಕು. ಹೀಗೆ ಮಾಡುವುದರಿಂದ ವಿನಾಶ ದೂರವಾದೀತು. ॥ ೨೪ ॥

**ಚಕ್ಷುಷಾ ಮನಸಾ ವಾಚಾ ಕರ್ಮಣಾ ಚ ಚತುರ್ವಿಧಮ್ ।**
**ಪ್ರಸಾದಯತಿ ಯೋ ಲೋಕಂ ತಂ ಲೋಕೋಽನುಪ್ರಸೀದತಿ ॥ ೨೫ ॥**

ಕಣ್ಣಿನಿಂದಲೂ, ಮನಸ್ಸಿನಿಂದಲೂ, ಮಾತಿನಿಂದಲೂ ಮತ್ತು ಪ್ರಜೋಪಯೋಗಿಯಾದ ಕಾರ್ಯಗಳಿಂದಲೂ ಯಾವ ರಾಜನು ಪ್ರಜೆಗಳನ್ನು ಸಂತುಷ್ಟಿಗೊಳಿಸುವನೋ ಅಂತಹವನ ಬಗ್ಗೆ ಪ್ರಜೆಗಳೂ ಸಂತುಷ್ಟರಾಗಿರುತ್ತಾರೆ. ॥ ೨೫ ॥

**ಯಸ್ಮಾತ್ ತ್ರಸ್ಯಂತಿ ಭೂತಾನಿ ಮೃಗವ್ಯಾಧಾನ್ಮೃಗಾ ಇವ ।**
**ಸಾಗರಾಂತಾಮಪಿ ಮಹೀಂ ಲಬ್ಧ್ವಾ ನ ಪರಿಹೀಯತೇ ॥ ೨೬ ॥**

ಬೇಟೆಯಾಡುವ ವ್ಯಾಧನ ದೆಸೆಯಿಂದ ಕಾಡಿನ ಜಿಂಕೆ ಮೊದಲಾದ ಪ್ರಾಣಿಗಳು ಭಯಪಟ್ಟು ಓಡುವಂತೆ – ಯಾವ ರಾಜನಿಂದ ಪ್ರಜೆಗಳು ಭಯ-ಭೀತರಾಗಿರುತ್ತಾರೆಯೋ ಅಂತಹ ರಾಜನು ಸಮುದ್ರದವರೆಗಿನ ಭೂಮಿಯನ್ನು ಹೊಂದಿಯೂ ಸಹ ಪ್ರಜೆಗಳಿಂದ ಪರಿತ್ಯಕ್ತನಾಗುತ್ತಾನೆ. ॥ ೨೬ ॥

**ಪಿತೃಪೈತಾಮಹಂ ರಾಜ್ಯಂ ಪ್ರಾಪ್ತವಾನ್ ಸ್ವೇನ ಕರ್ಮಣಾ ।**
**ವಾಯುರಭ್ರಮಿವಾಸಾದ್ಯ ಭ್ರಂಶಯತ್ಯನಯೇ ಸ್ಥಿತಃ ॥ ೨೭ ॥**

ರಾಜನು ತನ್ನ ತಂದೆ-ತಾತರಿಂದ ಪಡೆದ ರಾಜ್ಯವನ್ನೇ ಹೊಂದಿದ್ದರೂ ಸಹ ಉದ್ಧಟತನದಿಂದ ಕೂಡಿದ್ದರೆ ಗಾಳಿಯಿಂದ ಮೋಡಗಳು ಚದುರಿಸಲ್ಪಟ್ಟಂತೆ ರಾಜತ್ವದಿಂದ ದೂರಗೊಳ್ಳಲ್ಪಡುತ್ತಾನೆ. ॥ ೨೭ ॥

**ಧರ್ಮಮಾಚರತೋ ರಾಜ್ಞಃ ಸದ್ಭಿಶ್ಚರಿತಮಾದಿತಃ ।**
**ವಸುಧಾ ವಸುಸಂಪೂರ್ಣಾ ವರ್ಧತೇ ಭೂತಿವರ್ಧಿನೀ ॥ ೨೮ ॥**

ಅನೂಚಾನವಾಗಿ ಸತ್ಪುರುಷರಿಂದ ಅನುಸೃತವಾದ ಧರ್ಮಮಾರ್ಗದಲ್ಲಿಯೇ ನಡೆಯುವ ರಾಜನ ರಾಜ್ಯವು ಐಶ್ವರ್ಯದಿಂದ ಪರಿಪೂರ್ಣವಾಗಿ ದಿನದಿನಕ್ಕೂ ವೃದ್ಧಿಯನ್ನು ಹೊಂದುತ್ತದೆ. ರಾಜನ ಕೀರ್ತಿ ದಿನದಿನಕ್ಕೂ ಹೆಚ್ಚುತ್ತದೆ. ॥ ೨೮ ॥

**ಅಥ ಸಂತ್ಯಜತೋ ಧರ್ಮಮಧರ್ಮಂ ಚಾನುತಿಷ್ಠತಃ ।**
**ಪ್ರತಿಸಂವೇಷ್ಟತೇ ಭೂಮಿರಗ್ನೌ ಚರ್ಮಾಹಿತಂ ಯಥಾ ॥ ೨೯ ॥**

ಧರ್ಮಮಾರ್ಗವನ್ನು ಪರಿತ್ಯಜಿಸಿ ಅಧರ್ಮಮಾರ್ಗವನ್ನವಲಂಬಿಸಿರುವ

ರಾಜನ ರಾಜ್ಯವು ಬೆಂಕಿಯಲ್ಲಿ ಹಾಕಿದ ಚರ್ಮದಂತೆ - ದಿನದಿನ ಸಂಕುಚಿತವಾಗುತ್ತದೆ. ॥ ೨೯ ॥

**ಯ ಏವ ಯತ್ನಃ ಕ್ರಿಯತೇ ಪರರಾಷ್ಟ್ರವಿಮರ್ದನೇ ।**
**ಸ ಏವ ಯತ್ನಃ ಕರ್ತವ್ಯಃ ಸ್ವರಾಷ್ಟ್ರಪರಿಪಾಲನೇ ॥ ೩೦**

ಶತ್ರುರಾಷ್ಟ್ರವನ್ನು ಧ್ವಂಸಮಾಡುವುದರಲ್ಲಿ ರಾಜನಿಂದ ಯಾವ ಮಹಾಪ್ರಯ ಮಾಡಲ್ಪಡುತ್ತದೆಯೋ ಅದೇ ಪ್ರಯತ್ನವನ್ನು ಅವನು ತನ್ನ ರಾ಼ ಪರಿಪಾಲನೆಯಲ್ಲಿಯೂ ಮಾಡಬೇಕು. ॥ ೩೦ ॥

**ಧರ್ಮೇಣ ರಾಜ್ಯಂ ವಿಂದೇತ ಧರ್ಮೇಣ ಪರಿಪಾಲಯೇತ್ ।**
**ಧರ್ಮಮೂಲಾಂ ಶ್ರಿಯಂ ಪ್ರಾಪ್ಯ ನ ಜಹಾತಿ ನ ಹೀಯತೇ ॥ ೩೧**

ಧರ್ಮಮಾರ್ಗದಿಂದಲೇ ರಾಜ್ಯವನ್ನು ಸಂಪಾದಿಸಬೇಕು. ಹಾ಼ ಧರ್ಮದಿಂದಲೇ ಅದನ್ನು ಪಾಲಿಸಬೇಕು. ಏಕೆಂದರೆ ಧರ್ಮಮಾರ್ಗದಿ ರಾಜ್ಯಲಕ್ಷ್ಮಿಯನ್ನು ಪಡೆದವನು ಅದನ್ನೆಂದೂ ತ್ಯಜಿಸುವುದಿಲ್ಲ ಹಾಗೂ ರಾಜ್ಯಹೀನನಾಗುವ ಪರಿಸ್ಥಿತಿಯು ಬರುವುದಿಲ್ಲ. ॥ ೩೧ ॥

**ಅಪ್ಯುನ್ಮತ್ತಾತ್ ಪ್ರಲಪತೋ ಬಾಲಾಚ್ಚ ಪರಿಜಲ್ಪತಃ ।**
**ಸರ್ವತಃ ಸಾರಮಾದದ್ಯಾದಶ್ಮಭ್ಯ ಇವ ಕಾಂಚನಮ್ ॥ ೩೨**

ಅಸಂಗತವಾಗಿ ಮಾತನಾಡುವ ಹುಚ್ಚನಿಂದಾಗಲಿ ಅಥವಾ ತೊದಲು ನುಡಿಯ ಮಗುವಿನಿಂದಾಗಲೀ ಎಲ್ಲೆಡೆಯಿಂದಲೂ ಗುಣವನ್ನು ಗ್ರಹಿಸಬೇಕು. ಕಲ್ಲಿನಿ಼ ಚಿನ್ನವನ್ನು ಪಡೆಯುವಂತೆ ಎಲ್ಲರಿಂದಲೂ ಸಾರಭೂತವಾದ ಸದ್ಗುಣಗಳ ಪಡೆಯಬೇಕು. ॥ ೩೨ ॥

**ಸುವ್ಯಾಹೃತಾನಿ ಸೂಕ್ತಾನಿ ಸುಕೃತಾನಿ ತತಸ್ತತಃ ।**
**ಸಂಚಿನ್ವನ್ ಧೀರ ಆಸೀತ ಶಿಲಾಹಾರೀ ಶಿಲಂ ಯಥಾ ॥ ೩೩ ।**

ನೆಲದಲ್ಲಿ ಬಿದ್ದಿರುವ ಒಂದೊಂದೇ ಬತ್ತದ ಕಾಳುಗಳನ್ನು ಸಂಗ್ರಹಿಸುತ್ತಾ ಜೀ಼ ನಡೆಸುವುದಕ್ಕೆ 'ಶಿಲ 'ವೆನ್ನುತ್ತಾರೆ. ಅದರಿಂದ ಬದುಕುವವನು ಶಿಲಾಹಾರಿ. ಅವನ ಧೀರನಾದ ರಾಜನು ಸದ್ವ್ಯಾಖ್ಯಾನಗಳಿಂದಲೂ, ಸೂಕ್ತಿಗಳಿಂದಲೂ, ಸಂ಼ ಸತ್ಕರ್ಮಗಳಿಂದಲೂ ಸದ್ಗುಣಗಳನ್ನು ಸಂಗ್ರಹಿಸುತ್ತಾ ಜೀವನ ನಡೆಸಬೇಕು. ॥ ೩೩ ।

**ಗಂಧೇನ ಗಾವಃ ಪಶ್ಯಂತಿ ವೇದೈಃ ಪಶ್ಯಂತಿ ಬ್ರಾಹ್ಮಣಾಃ ।**
**ಚಾರೈಃ ಪಶ್ಯಂತಿ ರಾಜಾನಶ್ಚಕ್ಷುರ್ಭ್ಯಾಮಿತರೇ ಜನಾಃ ॥ ೩೪ ।**

ಹಸುಗಳು ವಾಸನೆಯಿಂದ ವಸ್ತುಗಳನ್ನು ಗ್ರಹಿಸುತ್ತವೆ. ಬ್ರಾಹ್ಮಣರು ವೇದಗಳಿಂದ ಎಲ್ಲವನ್ನೂ ಅರಿಯುತ್ತಾರೆ. ರಾಜರು ತಮ್ಮ ಗುಪ್ತಚಾರರ ಮೂಲಕ ರಾಜ್ಯದ ಮೂಲೆ ಮೂಲೆಗಳನ್ನೂ ತಿಳಿದುಕೊಳ್ಳುತ್ತಾರೆ. ಸಾಮಾನ್ಯ ಪ್ರಜೆಗಳಾದರೋ ಕಣ್ಣುಗಳ ಮೂಲಕ ಅರಿಯುತ್ತಾರೆ. ॥ ೩೪ ॥

**ಭೂಯಾಂಸಂ ಲಭತೇ ಕ್ಲೇಶಂ ಯಾ ಗೌರ್ಭವತಿ ದುರ್ದುಹಾ ।**
**ಅಥ ಯಾ ಸುದುಹಾ ರಾಜನ್ ನೈವ ತಾಂ ವಿತುದಂತ್ಯಪಿ ॥ ೩೫ ॥**

ಯಾವ ಹಸುವು ಸುಲಭವಾಗಿ ಹಾಲು ಕೊಡುವುದಿಲ್ಲವೋ, ಆ ಹಸುವು ಮಹತ್ತರವಾದ ಕ್ಲೇಶವನ್ನು ಅನುಭವಿಸುತ್ತದೆ. ಯಾವ ಹಸುವು ತಂಟೆ ಮಾಡದೇ ಹಾಲು ಕೊಡುವುದೋ ಅದನ್ನು ಯಾರೂ ದಂಡಿಸುವುದಿಲ್ಲ. ॥ ೩೫ ॥

**ಯದತಪ್ತಂ ಪ್ರಣಮತಿ ನ ತತ್ ಸಂತಾಪಯಂತ್ಯಪಿ ।**
**ಯಚ್ಚ ಸ್ವಯಂ ನತಂ ದಾರು ನ ತತ್ ಸಂನಮಯಂತ್ಯಪಿ ॥ ೩೬ ॥**

ಕಾಯಿಸದೆಯೇ ಬಗ್ಗುವ ಲೋಹವನ್ನು ಯಾರೂ ಕಾಯಿಸುವುದಿಲ್ಲ. ತಾನಾಗಿಯೇ ಬಗ್ಗಿರುವ ಮರದ ತುಂಡನ್ನು (ಕೋಲನ್ನು) ಯಾರೂ ಬಗ್ಗಿಸಲು ಹೋಗುವುದಿಲ್ಲ. ॥ ೩೬ ॥

**ಏತಯೋಪಮಯಾ ಧೀರಃ ಸಂನಮೇತ ಬಲೀಯಸೇ ।**
**ಇಂದ್ರಾಯ ಸ ಪ್ರಣಮತೇ ನಮತೇ ಯೋ ಬಲೀಯಸೇ ॥ ೩೭ ॥**

ಈ ಉದಾಹರಣೆಯನ್ನೇ ಮನಗಂಡು ಧೀರನಾದವನು ಬಲಿಷ್ಠನಿಗೆ ತಲೆತಗ್ಗಿಸಬೇಕು. ಬಲಿಷ್ಠನಾದವನಿಗೆ ತಲೆತಗ್ಗಿಸುವವನು ಇಂದ್ರನಿಗೇ ನಮಸ್ಕರಿಸಿದಂತೆ. ॥ ೩೭ ॥

**ಪರ್ಜನ್ಯನಾಥಾಃ ಪಶವೋ ರಾಜಾನೋ ಮಂತ್ರಿಬಾಂಧವಾಃ ।**
**ಪತಯೋ ಬಾಂಧವಾಃ ಸ್ತ್ರೀಣಾಂ ಬ್ರಾಹ್ಮಣಾ ವೇದಬಾಂಧವಾಃ ॥ ೩೮ ॥**

ಪ್ರಾಣಿಗಳು ಪರ್ಜನ್ಯನಾಥರು. ಅಂದರೆ ಮೋಡವೇ ಪ್ರಾಣಿಗಳಿಗೆ ಒಡೆಯ. ರಾಜನಿಗೆ ನಿಜವಾದ ಬಂಧುಗಳೆಂದರೆ ಮಂತ್ರಿಗಳು. ಹೆಂಗಸರಿಗೆ ಅವರ ಗಂಡಂದಿರೇ ಬಾಂಧವರು. ಬ್ರಾಹ್ಮಣರಿಗೆ ವೇದಗಳೇ ಬಂಧುಗಳು. ॥ ೩೮ ॥

**ಸತ್ಯೇನ ರಕ್ಷ್ಯತೇ ಧರ್ಮೋ ವಿದ್ಯಾ ಯೋಗೇನ ರಕ್ಷ್ಯತೇ ।**
**ಮೃಜಯಾ ರಕ್ಷ್ಯತೇ ರೂಪಂ ಕುಲಂ ವೃತ್ತೇನ ರಕ್ಷ್ಯತೇ ॥ ೩೯ ॥**

ಸತ್ಯದಿಂದ ಧರ್ಮವು ರಕ್ಷಿಸಲ್ಪಡುತ್ತದೆ. ವಿದ್ಯೆಯು ಅಭ್ಯಾಸದಿಂದ ರಕ್ಷಿತವಾಗುತ್ತದೆ.

ಶರೀರವನ್ನು ಶುದ್ಧವಾಗಿಟ್ಟುಕೊಳ್ಳುವುದರಿಂದ ರೂಪವು ರಕ್ಷಿಸಲ್ಪಡುತ್ತದೆ. ಸದಾಚಾರದಿ ವಂಶವು ರಕ್ಷಿಸಲ್ಪಡುತ್ತದೆ. ॥ ೩೯ ॥

**ಮಾನೇನ ರಕ್ಷ್ಯತೇ ಧಾನ್ಯಮಶ್ವಾನ್ ರಕ್ಷತ್ಯನುಕ್ರಮಃ ।**
**ಅಭೀಕ್ಷ್ಣದರ್ಶನಂ ಗಾಶ್ಚ ಸ್ತ್ರಿಯೋ ರಕ್ಷ್ಯಾಃ ಕುಚೈಲತಃ ॥ ೪೦**

ತೂಕಮಾಡಿ ಇಡುವುದರಿಂದ ಧಾನ್ಯವು ರಕ್ಷಿತವಾಗಿರುತ್ತದೆ. ಸಂಚಾರದಿ ಕುದುರೆಯು ರಕ್ಷಿತವಾಗುತ್ತದೆ. ಹಸುಗಳು ನಿರಂತರವಾಗಿ ಅವಲೋಕಿಸುವುದರಿ ರಕ್ಷಿಸಲ್ಪಡುತ್ತವೆ. ಸ್ತ್ರೀಯರನ್ನು ಮಲಿನವಸ್ತ್ರದಿಂದ ಸಂರಕ್ಷಿಸಬೇಕು. (ಸ್ತ್ರೀಯರು ಮ ಬಟ್ಟೆಯನ್ನು ಉಡುವ ಪ್ರಸಂಗಬಾರದಂತೆ ಎಚ್ಚರಿಕೆ ವಹಿಸಬೇಕು.) ॥ ೪೦ ॥

**ನ ಕುಲಂ ವೃತ್ತಹೀನಸ್ಯ ಪ್ರಮಾಣಮಿತಿ ಮೇ ಮತಿಃ ।**
**ಅಂತೇಷ್ವಪಿ ಹಿ ಜಾತಾನಾಂ ವೃತ್ತಮೇವ ವಿಶಿಷ್ಯತೇ ॥ ೪೧**

ಸತ್ಕುಲಪ್ರಸೂತನಾಗಿದ್ದರೂ ಕೂಡ ಮಾನವನು ಆಚಾರಹೀನನಾಗಿ ಮಾನ್ಯನಾಗುವುದಿಲ್ಲವೆಂಬುದು ನನ್ನ ಅಭಿಪ್ರಾಯವಾಗಿದೆ. ಆದಕ್ಕೆ ಬದಲ ನೀಚಕುಲದಲ್ಲಿ ಹುಟ್ಟಿಯೂ ಮಾನವನು ಸದಾಚಾರಸಂಪನ್ನನಾಗಿದ್ದರೆ ಪುರಸ್ಕೃತನಾಗುತ್ತಾನೆ. ॥ ೪೧ ॥

**ಯ ಈರ್ಷುಃ ಪರವಿತ್ತೇಷು ರೂಪೇ ವೀರ್ಯೇ ಕುಲಾನ್ವಯೇ ।**
**ಸುಖಸೌಭಾಗ್ಯಸತ್ಕಾರೇ ತಸ್ಯ ವ್ಯಾಧಿರನಂತಕಃ ॥ ೪೨**

ಯಾರು ಮತ್ತೊಬ್ಬರ ಹಣ, ರೂಪ, ಪರಾಕ್ರಮ, ಸತ್ಕುಲ, ಸುಖ, ಸೌಭಾ ಅವರಿಗೆ ಸಲ್ಲುವ ಸತ್ಕಾರ – ಇವುಗಳ ಬಗ್ಗೆ ಅಸೂಯೆಪಡುವನೋ ಅವನ ರೋ ಅಂತ್ಯವೇ ಇಲ್ಲವಾಗುತ್ತದೆ. ॥ ೪೨ ॥

**ಅಕಾರ್ಯಕರಣಾದ್ ಭೀತಃ ಕಾರ್ಯಾಣಾಂ ಚ ವಿವರ್ಜನಾತ್ ।**
**ಅಕಾಲೇ ಮಂತ್ರಭೇದಾಚ್ಚ ಯೇನ ಮಾದ್ಯೇನ್ನ ತತ್ ಪಿಬೇತ್ ॥ ೪೩ ।**

ಅಕಾರ್ಯವನ್ನು ಮಾಡುವುದರಿಂದ, ಮಾಡಬೇಕಾದ ಕಾರ್ಯವನ್ನು ಮಾಡ ಇರುವುದರಿಂದ ಮತ್ತು ಕಾರ್ಯವು ಮುಗಿಯುವ ಮೊದಲೇ ಗು ರಟ್ಟಾಗುವುದರಿಂದ ಭೀತನಾಗಿರಬೇಕು. ಯಾವುದರಿಂದ ಮದ ಬಂದೀತೋ ಅಂ ಪೇಯವನ್ನು ಸೇವಿಸಬಾರದು. ॥ ೪೩. ॥

**ವಿದ್ಯಾಮದೋ ಧನಮದಸ್ತೃತೀಯೋಽಭಿಜನೋ ಮದಃ ।**
**ಮದಾ ಏತೇಽವಲಿಪ್ತಾನಾಮೇತ ಏವ ಸತಾಂ ದಮಾಃ ॥ ೪೪ ।**

ವಿದ್ಯಾಮದ, ಧನಮದ ಹಾಗೂ ಶ್ರೇಷ್ಠಕುಲದಲ್ಲಿ ಹುಟ್ಟಿದ ಮದ - ಎಂದು ಮೂರು ಮದಗಳಿವೆ. ಗರ್ವಿಷ್ಠರಾಗಿರುವವರ ಗರ್ವಕ್ಕೆ ಇವೇ ಕಾರಣಭೂತಗಳಾಗಿರುತ್ತವೆ. ಆದರೆ ಈ ಮೂರೇ ಸತ್ಪುರುಷರ ಜಿತೇಂದ್ರಿಯತ್ವಕ್ಕೂ ಕಾರಣವಾಗುತ್ತವೆ. ॥ ೪೪ ॥

**ಅಸಂತೋಽಭ್ಯರ್ಥಿತಾಃ ಸದ್ಭಿಃ ಕ್ವಚಿತ್ಕಾರ್ಯೇ ಕದಾಚನ ।**
**ಮನ್ಯಂತೇ ಸಂತಮಾತ್ಮಾನಮಸಂತಮಪಿ ವಿಶ್ರುತಮ್ ॥ ೪೫ ॥**

ಯಾವುದೋ ಒಂದು ಸಮಯದಲ್ಲಿ, ಯಾವುದೋ ಕಾರಣಕ್ಕಾಗಿ ಸಜ್ಜನರು ದುರ್ಜನರ ಬಳಿಗೆ ಹೋಗಿ ಸ್ವಲ್ಪ ಸಹಾಯಕ್ಕಾಗಿ ಪ್ರಾರ್ಥಿಸಿದಲ್ಲಿ, ತಮ್ಮ ದುಷ್ಟತನವು ಜನಜನಿತವಾಗಿದ್ದರೂ ಕೂಡಾ ದುಷ್ಟರು ತಾವು ಸಜ್ಜನರೆಂದೇ ಭಾವಿಸುತ್ತಾರೆ. ॥ ೪೫ ॥

**ಗತಿರಾತ್ಮವತಾಂ ಸಂತಃ ಸಂತ ಏವ ಸತಾಂ ಗತಿಃ ।**
**ಅಸತಾಂ ಚ ಗತಿಃ ಸಂತೋ ನ ತ್ವಸಂತಃ ಸತಾಂ ಗತಿಃ ॥ ೪೬ ॥**

ಮನಸ್ಸನ್ನು ನಿಗ್ರಹಿಸಿರುವವರಿಗೆ ಸತ್ಪುರುಷರೇ ಆಶ್ರಯದಾತರಾಗುತ್ತಾರೆ. ಸತ್ಪುರುಷರಿಗೂ ಅಸತ್ಪುರುಷರಿಗೂ ಸಹ ಸತ್ಪುರುಷರೇ ಆಶ್ರಯದಾತರಾಗುತ್ತಾರೆ. ಅಸತ್ಪುರುಷರೆಂದಿಗೂ ಸತ್ಪುರುಷರಿಗೆ ಆಶ್ರಯದಾತರಾಗುವುದಿಲ್ಲ. ॥ ೪೬ ॥

**ಜಿತಾ ಸಭಾ ವಸ್ತ್ರವತಾ ಮಿಷ್ಟಾಶಾ ಗೋಮತಾ ಜಿತಾ ।**
**ಅಧ್ವಾ ಜಿತೋ ಯಾನವತಾ ಸರ್ವಂ ಶೀಲವತಾ ಜಿತಮ್ ॥ ೪೭ ॥**

ಉತ್ತಮ ವಸ್ತ್ರಗಳನ್ನು ಧರಿಸಿರುವವನು ಸಭೆಯಲ್ಲಿ ಮಾನ್ಯನಾಗುತ್ತಾನೆ (ಜಯಶೀಲ-ನಾಗುತ್ತಾನೆ). ಗೋಸಮೃದ್ಧಿಯುಳ್ಳವನು (ಹಾಲು-ತುಪ್ಪ-ಮೊಸರು ಮುಂತಾದವನ್ನು) ಯಥೇಚ್ಛವಾಗಿ ತಿಂದು ತನ್ನ ಆಶೆಯನ್ನು ಪೂರ್ಣಮಾಡಿಕೊಳ್ಳುತ್ತಾನೆ. ವಾಹನವಿರುವವನು ದಾರಿಯನ್ನು ಜಯಿಸುತ್ತಾನೆ. ಶೀಲವಂತನು ಎಲ್ಲವನ್ನೂ ಗೆಲ್ಲುತ್ತಾನೆ. ॥ ೪೭ ॥

**ಶೀಲಂ ಪ್ರಧಾನಂ ಪುರುಷೇ ತದ್ ಯಸ್ಯೇಹ ಪ್ರಣಶ್ಯತಿ ।**
**ನ ತಸ್ಯ ಜೀವಿತೇನಾರ್ಥೋ ನ ಧನೇನ ನ ಬಂಧುಭಿಃ ॥ ೪೮ ॥**

ಪುರುಷರಲ್ಲಿ ಪ್ರಧಾನವಾಗಿ ಇರಬೇಕಾದುದು ಶೀಲ. ಯಾವನಲ್ಲಿ ಅದು ಲುಪ್ತವಾಗಿರುವುದೋ ಅವನ ಜೀವಿತವೇ ವ್ಯರ್ಥ. ಶೀಲರಹಿತನಿಗೆ ಅಪಾರವಾದ ಹಣದಿಂದಾಗಲೀ, ಬಂಧುಗಳಿಂದಾಗಲೀ ಯಾವ ಪ್ರಯೋಜನವೂ ಆಗುವುದಿಲ್ಲ. ॥ ೪೮ ॥

**ಆಢ್ಯಾನಾಂ ಮಾಂಸಪರಮಂ ಮಧ್ಯಾನಾಂ ಗೋರಸೋತ್ತರಮ್ ।**
**ತೈಲೋತ್ತರಂ ದರಿದ್ರಾಣಾಂ ಭೋಜನಂ ಭರತರ್ಷಭ ॥ ೪೯ ॥**

ಭರತಶ್ರೇಷ್ಠ ! ಐಶ್ವರ್ಯವಂತರಾದವರು ಮಾಂಸಪ್ರಧಾನ ಆಹಾರವನ್ನೂ, ಮಧ್ಯಮವರ್ಗದವರು ಗೋರಸಪ್ರಧಾನವಾದ (ಹಾಲು – ಮುಂತಾದವು) ಆಹಾರವನ್ನೂ ಹಾಗೂ ದರಿದ್ರರಾದವರು ತೈಲ ಪ್ರಧಾನ ಆಹಾರವನ್ನೂ ಸೇವಿಸುತ್ತಾರೆ. ॥ ೪೯ ॥

**ಸಂಪನ್ನತರಮೇವಾನ್ನಂ ದರಿದ್ರಾ ಭುಂಜತೇ ಸದಾ ।**
**ಕ್ಷುತ್ ಸ್ವಾದುತಾಂ ಜನಯತಿ ಸಾ ಚಾಢ್ಯೇಷು ಸುದುರ್ಲಭಾ ॥ ೫೦**

ದರಿದ್ರರಾದವರು ರುಚಿಕರವಾದ ಅನ್ನವನ್ನೇ ಯಾವಾಗಲೂ ತಿನ್ನುತ್ತಾರೆ. ಏಕೆ ಹೊಟ್ಟೆಹಸಿವು ಆಹಾರದ ರುಚಿಯನ್ನು ಹೆಚ್ಚಿಸುತ್ತದೆ. ಇದು ಧನಿಕರಿಗೆ ಅತ್ ದುರ್ಲಭವಾದದ್ದು. ॥ ೫೦ ॥

**ಪ್ರಾಯೇಣ ಶ್ರೀಮತಾಂ ಲೋಕೇ ಭೋಕ್ತುಂ ಶಕ್ತಿರ್ನ ವಿದ್ಯತೇ ।**
**ಜೀರ್ಯಂತ್ಯಪಿ ಹಿ ಕಾಷ್ಠಾನಿ ದರಿದ್ರಾಣಾಂ ಮಹೀಪತೇ ॥ ೫೧**

ಮಹಾರಾಜ ! ಪ್ರಾಯಶಃ ಲೋಕದಲ್ಲಿ ಶ್ರೀಮಂತರಾದವರಿಗೆ ಊಟ ಮ ಜೀರ್ಣಿಸಿಕೊಳ್ಳುವ ಶಕ್ತಿಯೇ ಇರುವುದಿಲ್ಲ. ಬಡವರ ಜಠರಾಗ್ನಿಯಾದ ಕಟ್ಟಿಗೆಯನ್ನೂ ಕೂಡಾ ಜೀರ್ಣಗೊಳಿಸಿಬಿಡುತ್ತದೆ. ॥ ೫೧ ॥

**ಅವೃತ್ತಿರ್ಭಯಮಂತ್ಯಾನಾಂ ಮಧ್ಯಾನಾಂ ಮರಣಾದ್ ಭಯಮ್ ।**
**ಉತ್ತಮಾನಾಂ ತು ಮರ್ತ್ಯಾನಾಮವಮಾನಾತ್ ಪರಂ ಭಯಮ್ ॥ ೫೨**

ಕೆಳದರ್ಜೆಯ ಜನರಿಗೆ ಹೊಟ್ಟೆಯ ಪಾಡಿಗಾಗಿ ಕೆಲಸ ದೊರಕದಿರುವುದು ಭಂ ಕಾರಣವಾಗಿರುತ್ತದೆ. ಮಧ್ಯಮ ವರ್ಗದವರಿಗೆ ಸಾವಿನ ಭಯವಿರುತ್ ಉತ್ತಮವರ್ಗದವರಿಗೆ ಮಾನಹಾನಿಯ ಭಯವೇ ಹೆಚ್ಚಿರುತ್ತದೆ. ॥ ೫೨ ॥

**ಐಶ್ವರ್ಯಮದಪಾಪಿಷ್ಠಾ ಮದಾಃ ಪಾನಮದಾದಯಃ ।**
**ಐಶ್ವರ್ಯಮದಮತ್ತೋ ಹಿ ನಾಪತಿತ್ವಾ ವಿಬುಧ್ಯತೇ ॥ ೫೩**

ಐಶ್ವರ್ಯಮದವು ಎಲ್ಲ ಮದಗಳಿಗಿಂತ ಹೀನವಾದುದು. ಪಾನಮದಕ್ಕಿಂತ ಪರಮ ಹೀನವಾದುದು ಅದು. ಐಶ್ವರ್ಯಮದದಿಂದ ಮತ್ತರಾದವರು ಜೀವನ ಅಧಃಪತನ ಹೊಂದುವವರೆಗೂ ನಿಶೆಯಿಂದ ಹೊರಬರುವುದಿಲ್ಲ. ॥ ೫೩. ॥

**ಇಂದ್ರಿಯೈರಿಂದ್ರಿಯಾರ್ಥೇಷು ವರ್ತಮಾನೈರನಿಗ್ರಹೈಃ ।**
**ತೈರಯಂ ತಾಪ್ಯತೇ ಲೋಕೋ ನಕ್ಷತ್ರಾಣಿ ಗ್ರಹೈರಿವ ॥ ೫೪**

ಪಂಚೇಂದ್ರಿಯಗಳಿಗೆ ಇಂದ್ರಿಯಾರ್ಥಗಳು (ಶಬ್ದ, ಸ್ಪರ್ಶ, ರೂಪ, ರಸ, ಗಂಧಗ

ವಿಷಯಗಳಾಗಿವೆ. ಹತೋಟಿಯಲ್ಲಿರದ ಈ ಇಂದ್ರಿಯಗಳು ಪ್ರಪಂಚದಲ್ಲಿರುವ ಎಲ್ಲರನ್ನೂ ಬಾಧಿಸುತ್ತವೆ. ನಕ್ಷತ್ರಗಳು ಗ್ರಹಗಳಿಂದ ಪೀಡಿಸಲ್ಪಡುವಂತೆ ಇಂದ್ರಿಯನಿಗ್ರಹವಿರದ ಮನುಷ್ಯನು ಇಂದ್ರಿಯಗಳಿಂದ ಬಾಧಿಸಲ್ಪಡುತ್ತಾನೆ. ॥ ೫೪ ॥

**ಯೋ ಜಿತಃ ಪಂಚವರ್ಗೇಣ ಸಹಜೇನಾತ್ಮಕರ್ಷಿಣಾ ।**
**ಆಪದಸ್ತಸ್ಯ ವರ್ಧಂತೇ ಶುಕ್ಲಪಕ್ಷ ಇವೋಡುರಾಟ್ ॥ ೫೫ ॥**

ಸಹಜವಾಗಿರುವ, ಆತ್ಮಕ್ಕೆ ಘಾತವನ್ನುಂಟುಮಾಡುವ, ಪ್ರಾಣಗಳನ್ನು ತಮ್ಮ ವಶಕ್ಕೆ ಎಳೆದುಕೊಳ್ಳುವ ಪಂಚೇಂದ್ರಿಯಗಳೇ ಯಾವನನ್ನು ಜಯಿಸಿವೆಯೋ ಅಂತಹವನ ಆಪತ್ತುಗಳು ಶುಕ್ಲಪಕ್ಷದ ಚಂದ್ರನಂತೆ ದಿನದಿನಕ್ಕೂ ಬೆಳೆಯುತ್ತಿರುತ್ತವೆ. ॥ ೫೫ ॥

**ಅವಿಜಿತ್ಯ ಯ ಆತ್ಮಾನಮಮಾತ್ಯಾನ್ ವಿಜಿಗೀಷತೇ ।**
**ಅಮಿತ್ರಾನ್ ವಾಜಿತಾಮಾತ್ಯಃ ಸೋऽವಶಃ ಪರಿಹೀಯತೇ ॥ ೫೬ ॥**

ತನ್ನ ಇಂದ್ರಿಯಗಳನ್ನು ಜಯಿಸದೆ ಯಾರು ತನ್ನ ಮಂತ್ರಿಗಳನ್ನು ಸ್ವಾಧೀನದಲ್ಲಿಟ್ಟುಕೊಳ್ಳಲು ಬಯಸುತ್ತಾನೆಯೋ, ಮಂತ್ರಿಗಳನ್ನು ಜಯಿಸದೆ ಯಾರು ಶತ್ರುಗಳನ್ನು ಗೆಲ್ಲಲು ಬಯಸುತ್ತಾನೆಯೋ ಅಂತಹ ಅಜಿತೇಂದ್ರಿಯನು ಅಸಹಾಯನಾಗಿ ಎಲ್ಲರಿಂದಲೂ ತ್ಯಜಿಸಲ್ಪಟ್ಟವನಾಗುತ್ತಾನೆ. ॥ ೫೬ ॥

**ಆತ್ಮಾನಮೇವ ಪ್ರಥಮಂ ದ್ವೇಷ್ಯರೂಪೇಣ ಯೋ ಜಯೇತ್ ।**
**ತತೋऽಮಾತ್ಯಾನಮಿತ್ರಾಂಶ್ಚ ನ ಮೋಘಂ ವಿಜಿಗೀಷತೇ ॥ ೫೭ ॥**

ಯಾರು ಮೊದಲು ತನ್ನ ಮನಸ್ಸು ಹಾಗೂ ಇಂದ್ರಿಯಗಳನ್ನೇ ಶತ್ರುಗಳೆಂದು ಭಾವಿಸಿ ಅವುಗಳನ್ನು ಜಯಿಸುತ್ತಾನೆಯೋ ಅಂತಹ ಜಿತೇಂದ್ರಿಯನು ಮಂತ್ರಿ-ಶತ್ರುಗಳನ್ನು ಜಯಿಸಬೇಕೆಂಬ ಪ್ರಯತ್ನ ಮಾಡಿದರೆ ಅದು ಖಂಡಿತವಾಗಿಯೂ ವ್ಯರ್ಥವಾಗುವುದಿಲ್ಲ. ॥೫೭॥

**ವಶ್ಯೇಂದ್ರಿಯಂ ಜಿತಾತ್ಮಾನಂ ಧೃತದಂಡಂ ವಿಕಾರಿಷು ।**
**ಪರೀಕ್ಷ್ಯ ಕಾರಿಣಂ ಧೀರಮತ್ಯಂತಂ ಶ್ರೀರ್ನಿಷೇವತೇ ॥ ೫೮ ॥**

ಇಂದ್ರಿಯಗಳನ್ನು ಮತ್ತು ಮನಸ್ಸನ್ನು ಜಯಿಸಿರುವವನನ್ನೂ, ಅಪರಾಧಿಗಳನ್ನು ಯೋಗ್ಯವಾಗಿ ಶಿಕ್ಷಿಸುವವನನ್ನೂ ಹಾಗೂ ಸರಿಯಾಗಿ ಪರೀಕ್ಷಿಸಿ ಕಾರ್ಯಕೈಗೊಳ್ಳುವ ಧೀರನನ್ನೂ ಲಕ್ಷ್ಮಿಯು ಚೆನ್ನಾಗಿ ಸೇವಿಸುತ್ತಾಳೆ. ॥ ೫೮ ॥

ರಥಃ ಶರೀರಂ ಪುರುಷಸ್ಯ ರಾಜನ್
ಆತ್ಮಾ ನಿಯತೇಂದ್ರಿಯಾಣ್ಯಸ್ಯ ಚಾಶ್ವಾಃ ।
ತೈರಪ್ರಮತ್ತಃ ಕುಶಲೀ ಸದಶ್ವೈ-
ರ್ದಾಂತ್ಯೈಃ ಸುಖಂ ಯಾತಿ ರಥೀವ ಧೀರಃ ॥ ೫೯ ॥

ರಾಜನೇ ! ಮನುಷ್ಯನ ಶರೀರ ರಥವಿದ್ದಂತೆ. ಬುದ್ಧಿಯೇ ಸಾರಥಿ ಹಾ ಇಂದ್ರಿಯಗಳು ರಥದ ಅಶ್ವಗಳಿದ್ದಂತೆ. ಇವುಗಳನ್ನು ನಿಗ್ರಹದಲ್ಲಿಟ್ಟುಕೊಂ ಜಾಗರೂಕತೆಯಿಂದ ಜೀವಿಸುವ ಧೀರನು, ನಿಗ್ರಹಿಸಿರುವ ಉತ್ತಮ ಕುದುರೆಗಳ ಹೊಂದಿರುವ ರಥಿಕನಂತೆ ಸುಖವಾಗಿ ಯಾತ್ರೆಯನ್ನು ಕೈಗೊಳ್ಳುತ್ತಾನೆ. ॥ ೫೯ ॥

ಏತಾನ್ಯನಿಗೃಹೀತಾನಿ ವ್ಯಾಪಾದಯಿತುಮಪ್ಯಲಮ್ ।
ಅವಿಧೇಯಾ ಇವಾದಾಂತಾ ಹಯಾಃ ಪಥಿ ಕುಸಾರಥಿಮ್ ॥ ೬೦ ।

ಯಾವ ರೀತಿಯಲ್ಲಿ ಪಳಗದ ಮತ್ತು ಹತೋಟಿಗೆ ಸಿಕ್ಕದ ಕುದುರೆಗ ಕುದುರೆಗಳನ್ನು ಓಡಿಸುವುದನ್ನು ಸರಿಯಾಗಿ ತಿಳಿಯದ ಕುಸಾರಥಿಯನ್ನು ಕೆಳಕ್ಕೆ ಕೆಡ ಸಾಯಿಸಲು ಕೂಡಾ ಸಮರ್ಥವಾಗುತ್ತವೆಯೋ ಅದೇ ರೀತಿಯಲ್ಲಿ ನಿಗ್ರಹಕ್ಕೊಳಪಡ ಇಂದ್ರಿಯಗಳು ಶರೀರಿಯನ್ನು ಧ್ವಂಸಮಾಡಿಬಿಡಬಲ್ಲವು. ॥ ೬೦ ॥

ಅನರ್ಥಮರ್ಥತಃ ಪಶ್ಯನ್ನರ್ಥಂ ಚೈವಾಪ್ಯನರ್ಥತಃ ।
ಇಂದ್ರಿಯೈರಜಿತೈರ್ಬಾಲಃ ಸುದುಃಖಂ ಮನ್ಯತೇ ಸುಖಮ್ ॥ ೬೧ ।

ಹತೋಟಿಗೆ ಸಿಕ್ಕದ ಇಂದ್ರಿಯಗಳಿಂದ ಕೂಡಿರುವ ಅಜ್ಞಾನಿಯಾ ಮನುಷ್ಯನು ಅನರ್ಥಕಾರಿಯಾದುದನ್ನು ಸರಿಯಾದದ್ದೆಂದೂ, ಸರಿಯಾದದ್ದ ಅನರ್ಥಕಾರಿಯೆಂದೂ ಭಾವಿಸುತ್ತಾನೆ. ಅತ್ಯಂತ ದುಃಖಕರವಾದುದನ್ನೂ ಉ ಸುಖದಾಯಕವೆಂದು ಭಾವಿಸುತ್ತಾನೆ. ॥ ೬೧ ॥

ಧರ್ಮಾರ್ಥೌ ಯಃ ಪರಿತ್ಯಜ್ಯ ಸ್ಯಾದಿಂದ್ರಿಯವಶಾನುಗಃ ।
ಶ್ರೀಪ್ರಾಣಧನದಾರೇಭ್ಯಃ ಕ್ಷಿಪ್ರಂ ಸ ಪರಿಹೀಯತೇ ॥ ೬೨ ॥

ಧರ್ಮಾರ್ಥಗಳನ್ನು ಪರಿತ್ಯಜಿಸಿ ಯಾರು ಇಂದ್ರಿಯಗಳ ದಾಸನಾಗಿರುತ್ತಾನೆಯೋ ಅಂತಹವನು ಸೌಭಾಗ್ಯ, ಪ್ರಾಣ, ಧನ, ಪತ್ನಿ ಇವೆಲ್ಲವುಗಳನ್ನೂ ಬಹು ಶೀಘ್ರದಲ್ಲಿಯೇ ಕಳೆದುಕೊಳ್ಳುತ್ತಾನೆ. ॥ ೬೨ ॥

ಅರ್ಥಾನಾಮೀಶ್ವರೋ ಯಃ ಸ್ಯಾದಿಂದ್ರಿಯಾಣಾಮನೀಶ್ವರಃ ।
ಇಂದ್ರಿಯಾಣಾಮನೈಶ್ವರ್ಯಾದೈಶ್ವರ್ಯಾದ್ ಭ್ರಶ್ಯತೇ ಹಿ ಸಃ ॥ ೬೩ ॥

ಯಾರು ಸಂಪತ್ತಿಗೆ ಒಡೆಯನಾಗಿದ್ದು ಇಂದ್ರಿಯಗಳಿಗೆ ದಾಸನಾಗಿರುವನೋ ಅವನು, ಇಂದ್ರಿಯಗಳಿಗೆ ಸ್ವಾಮಿಯಾಗದೇ ಇರುವುದರಿಂದ ಧನೈಶ್ವರ್ಯದಿಂದಲೂ ಚ್ಯುತನಾಗುತ್ತಾನೆ. ॥ ೬೩ ॥

**ಆತ್ಮನಾऽತ್ಮಾನಮನ್ವಿಚ್ಛೇನ್ಮನೋಬುದ್ಧೀಂದ್ರಿಯೈರ್ಯತೈಃ ।**
**ಆತ್ಮಾ ಹ್ಯೇವಾತ್ಮನೋ ಬಂಧುರಾತ್ಮೈವ ರಿಪುರಾತ್ಮನಃ ॥ ೬೪ ॥**

ಮನಸ್ಸು, ಬುದ್ಧಿ ಮತ್ತು ಇಂದ್ರಿಯಗಳನ್ನು ವಶಪಡಿಸಿಕೊಂಡು ತಾನೇ ಪ್ರಯತ್ನಪಟ್ಟು ಆತ್ಮನ ಅನ್ವೇಷಣೆಯನ್ನು ಮಾಡಬೇಕು. ಹೀಗೆ ಮಾಡಿದರೆ ತನಗೆ ತಾನೇ ಬಂಧುವಾಗುತ್ತಾನೆ. ಹಾಗಿಲ್ಲದೆ ಇಂದ್ರಿಯಪರವಶನಾದರೆ ತನಗೆ ತಾನೇ ಶತ್ರುವಾಗುತ್ತಾನೆ. ॥ ೬೪ ॥

**ಬಂಧುರಾತ್ಮಾऽತ್ಮನಸ್ತಸ್ಯ ಯೇನೈವಾತ್ಮಾತ್ಮನಾ ಜಿತಃ ।**
**ಸ ಏವ ನಿಯತೋ ಬಂಧುಃ ಸ ಏವ ನಿಯತೋ ರಿಪುಃ ॥ ೬೫ ॥**

ಯಾವನು ತನ್ನನ್ನು ತಾನೇ ಜಯಿಸಿಕೊಳ್ಳುತ್ತಾನೆಯೋ ಅವನೇ ಅವನಿಗೆ ಬಂಧುವಾಗುತ್ತಾನೆ. ಅರ್ಥಾತ್ ತನ್ನನ್ನು ನಿಯಮಿತಗೊಳಿಸಿದರೆ ತನಗೆ ತಾನೇ ಬಂಧುವಾಗುತ್ತಾನೆ. ತನ್ನನ್ನೇ ತಾನು ನಿಯಮಿತಗೊಳಿಸಿಕೊಳ್ಳದಿದ್ದರೆ ತನಗೆ ತಾನೇ ಶತ್ರುವಾಗುತ್ತಾನೆ. ॥ ೬೫ ॥

**ಕ್ಷುದ್ರಾಕ್ಷೇಣೇವ ಜಾಲೇನ ಝಷಾವಪಿಹಿತಾವುರೂ ।**
**ಕಾಮಶ್ಚ ರಾಜನ್ ಕ್ರೋಧಶ್ಚ ತೌ ಪ್ರಜ್ಞಾನಂ ವಿಲುಂಪತಃ ॥ ೬೬ ॥**

ರಾಜನೇ ! ಯಾವ ರೀತಿಯಲ್ಲಿ ಸೂಕ್ಷ್ಮವಾದ ಜಾಲದಲ್ಲಿ ಹಿಡಿಯಲ್ಪಟ್ಟಿರುವ ಎರಡು ದೊಡ್ಡ ಮೀನುಗಳು ಒಂದಾಗಿ ಆ ಜಾಲವನ್ನೇ ಕತ್ತರಿಸುವಂತೆ, ಕಾಮ ಹಾಗೂ ಕ್ರೋಧಗಳು ಮನುಷ್ಯನ ಪ್ರಜ್ಞೆಯನ್ನು ನಷ್ಟಮಾಡುತ್ತವೆ. ॥ ೬೬ ॥

**ಸಮವೇಕ್ಷ್ಯೇಹ ಧರ್ಮಾರ್ಥೌ ಸಂಭಾರಾನ್ ಯೋऽಧಿಗಚ್ಛತಿ ।**
**ಸ ವೈ ಸಂಭೃತಸಂಭಾರಃ ಸತತಂ ಸುಖಮೇಧತೇ ॥ ೬೭ ॥**

ಯಾರು ಧರ್ಮ ಹಾಗೂ ಧರ್ಮಮೂಲವಾದ ಅರ್ಥ ಯಾವುದೆಂಬುದನ್ನು ವಿವೇಚಿಸಿ ವಿಜಯಹೊಂದಲು ಅಗತ್ಯವಾದ ಸಾಮಗ್ರಿಗಳನ್ನು ಸಂಗ್ರಹಿಸಿಕೊಳ್ಳುತ್ತಾನೆಯೋ, ಆತನು ಆ ಸಾಮಗ್ರಿಗಳಿಂದ ಯುಕ್ತನಾಗಿದ್ದು ಸತತವಾಗಿ ಸುಖವನ್ನನುಭವಿಸುವನು. ॥ ೬೭ ॥

**ಯಃ ಪಂಚಾಭ್ಯಂತರಾಂಛತ್ರೂನವಿಜಿತ್ಯ ಮನೋಮಯಾನ್ ।**
**ಜಿಗೀಷತಿ ರಿಪೂನನ್ಯಾನ್ ರಿಪವೋऽಭಿಭವಂತಿ ತಮ್ ॥ ೬೮ ॥**

ಮನೋಮಯವಾಗಿರತಕ್ಕ ಶರೀರದೊಳಗೇ ಇರುವ ಪಂಚೇಂದ್ರಿಯರೂಪಃ ಮಹಾ ಶತ್ರುಗಳನ್ನು ಜಯಿಸದೇ ಯಾರು ಹೊರಗಿನ ಬೇರೆ ಶತ್ರುಗಳನ್ನು ಜ ಬಯಸುವನೋ ಅವನನ್ನು ಆ ಶತ್ರುಗಳೇ ಪರಾಭವಗೊಳಿಸುತ್ತಾರೆ. ॥ ೬೮ ॥

**ದೃಶ್ಯಂತೇ ಹಿ ಮಹಾತ್ಮಾನೋ ಬಧ್ಯಮಾನಾಃ ಸ್ವಕರ್ಮಭಿಃ ।**
**ಇಂದ್ರಿಯಾಣಾಮನೀಶತ್ವಾದ್ ರಾಜಾನೋ ರಾಜ್ಯವಿಭ್ರಮೈಃ ॥ ೬೯**

ಇಂದ್ರಿಯಗಳನ್ನು ಜಯಿಸಿರದ ಕಾರಣ ಮಹಾತ್ಮರೂ ತಮ್ಮ ಕರ್ಮಗ ಹಾಗೂ ರಾಜರುಗಳು ತಮ್ಮ ಭೋಗವಿಲಾಸಗಳಿಂದ ಬಂಧಿತರಾಗಿರು ಕಂಡುಬರುತ್ತದೆ. ॥ ೬೯ ॥

**ಅಸಂತ್ಯಾಗಾತ್ ಪಾಪಕೃತಾಮಪಾಪಾನ್**
**ತುಲ್ಯೋ ದಂಡಃ ಸ್ಪೃಶತೇ ಮಿಶ್ರಭಾವಾತ್ ।**
**ಶುಷ್ಕೇಣಾರ್ದ್ರಂ ದಹ್ಯತೇ ಮಿಶ್ರಭಾವಾತ್**
**ತಸ್ಮಾತ್ ಪಾಪೈಃ ಸಹ ಸಂಧಿಂ ನ ಕುರ್ಯಾತ್ ॥ ೭೦ ।**

ಸತ್ಪುರುಷರು ದುಷ್ಟರನ್ನು ದೂರವಿಡದೇ ಇದ್ದರೆ ದುಷ್ಟರ ಸಹವರ್ತನೆಯಿಂ ಸಜ್ಜನರಿಗೂ ದುಷ್ಟರಿಗೆ ವಿಧಿಸಲ್ಪಡುವ ಶಿಕ್ಷೆಯೇ ವಿಧಿಸಲ್ಪಡುತ್ತದೆ. ಯಾವ ರೀತಿಂ ಒಣಗಿದ ಕಟ್ಟಿಗೆಯೊಡನೆ ಹಸಿಕಟ್ಟಿಗೆಯೂ ಉರಿದು ಭಸ್ಮವಾಗುತ್ತದೆಯೋ ಹಾಗೆ ದುಷ್ಟರೊಡನೆ ಸೇರಿದ ಸಜ್ಜನರೂ ವಿನಾಶ ಹೊಂದುತ್ತಾರೆ. ಆದುದ ಪಾಪಿಷ್ಠರಾದವರೊಡನೆ ಯಾವ ಕಾರಣದಿಂದಲೂ ಸೇರಬಾರದು. ॥ ೭೦ ॥

**ನಿಜಾನುತ್ಪತತಃ ಶತ್ರೂನ್ ಪಂಚ ಪಂಚಪ್ರಯೋಜನಾನ್ ।**
**ಯೋ ಮೋಹಾನ್ನ ನಿಗೃಹ್ಣಾತಿ ತಮಾಪದ್ ಗ್ರಸತೇ ನರಮ್ ॥ ೭೧**

ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳೆಂಬ ಐದು ವಿಧವಾದ ವಿಷಯಗಳ ಕ ಸದಾ ಒಯ್ಯುವ ಐವರು ಶತ್ರುಗಳನ್ನು ಯಾವನು ಮೋಹಪರವಶ ನಿಗ್ರಹಿಸುವುದಿಲ್ಲವೋ ಅಂತಹ ಮನುಷ್ಯನನ್ನು ವಿಪತ್ತು ನುಂಗಿಹಾಕಿ ಬಿಡುತ್ತದೆ. ॥ ೭

**ಅನಸೂಯಾಽಽರ್ಜವಂ ಶೌಚಂ ಸಂತೋಷಃ ಪ್ರಿಯವಾದಿತಾ ।**
**ದಮಃ ಸತ್ಯಮನಾಯಾಸೋ ನ ಭವಂತಿ ದುರಾತ್ಮನಾಮ್ ॥ ೭೨**

ಅಸೂಯೆ ಪಡದಿರುವುದು, ಸರಳತೆ, ಪವಿತ್ರತೆ, ಸಂತೃಪ್ತಿ, ಪ್ರಿಯ ಮಾತುಗಳನ್ನಾಡುವುದು, ಜಿತೇಂದ್ರಿಯತೆ, ಸತ್ಯನಿಷ್ಠೆ, ಅಚಾಂಚಲ್ಯ – ಇವು ದುರಾತ್ಮರಾದವರಲ್ಲಿ ಇರುವುದಿಲ್ಲ. ॥ ೭೨ ॥

**ಆತ್ಮಜ್ಞಾನಮಸಂರಂಭಸ್ತಿತಿಕ್ಷಾ ಧರ್ಮನಿತ್ಯತಾ ।**
**ವಾಕ್ ಚೈವ ಗುಪ್ತಾ ದಾನಂ ಚ ನೈತಾನ್ಯಂತ್ಯೇಷು ಭಾರತ ॥ ೭೩ ॥**

ಹೇ ಭಾರತ ! ಆತ್ಮಜ್ಞಾನ, ಅಕ್ರೋಧ, ಸಹನಶೀಲತೆ, ಧರ್ಮಪರಾಯಣತೆ, ವಾಗ್ರಕ್ಷಣ (ಕೊಟ್ಟ ಮಾತಿಗೆ ತಪ್ಪದಿರುವುದು) ಮತ್ತು ಸತ್ಪಾತ್ರರಲ್ಲಿ ದಾನ - ಈ ಗುಣಗಳು ದುಷ್ಟರಲ್ಲಿ ಕಂಡುಬರುವುದಿಲ್ಲ. ॥ ೭೩ ॥

**ಆಕ್ರೋಶಪರಿವಾದಾಭ್ಯಾಂ ವಿಹಿಂಸಂತ್ಯಬುಧಾ ಬುಧಾನ್ ।**
**ವಕ್ತಾ ಪಾಪಮುಪಾದತ್ತೇ ಕ್ಷಮಮಾಣೋ ವಿಮುಚ್ಯತೇ ॥ ೭೪ ॥**

ಮೂರ್ಖರಾದವರು ವಿದ್ವಾಂಸರನ್ನು ನಿಂದನೆಗಳಿಂದಲೂ, ಇಲ್ಲಸಲ್ಲದ ಅಪವಾದಗಳ ಆರೋಪಣೆಗಳಿಂದಲೂ ಹಿಂಸೆಪಡಿಸುತ್ತಾರೆ. ಬಯ್ಯುವವನು ಸತ್ಪುರುಷರಲ್ಲಿರಬಹುದಾದ ಅಲ್ಪ-ಸ್ವಲ್ಪ ಪಾಪಗಳನ್ನೂ ಸಹ ಬೈಗುಳದ ವಿನಿಮಯರೂಪದಲ್ಲಿ ಪಡೆದುಕೊಳ್ಳುತ್ತಾನೆ. ಕ್ಷಮಾವಂತನಾದ ಸತ್ಪುರುಷನು ಪಾಪದಿಂದ ವಿಮೋಚನೆ ಹೊಂದುತ್ತಾನೆ. ॥ ೭೪ ॥

**ಹಿಂಸಾ ಬಲಮಸಾಧೂನಾಂ ರಾಜ್ಞಾಂ ದಂಡವಿಧಿರ್ಬಲಮ್ ।**
**ಶುಶ್ರೂಷಾ ತು ಬಲಂ ಸ್ತ್ರೀಣಾಂ ಕ್ಷಮಾ ಗುಣವತಾಂ ಬಲಮ್ ॥ ೭೫ ॥**

ದುಷ್ಟರಿಗೆ ಹಿಂಸೆಯೇ ಬಲವಾಗಿರುತ್ತದೆ. ರಾಜರಿಗೆ ಅವರು ಕೊಡುವ ಶಿಕ್ಷೆಯೇ ಬಲವಾಗಿರುತ್ತದೆ. ಸ್ತ್ರೀಯರಿಗೆ ಅವರ ಸೇವಾಪರತೆಯೇ ಬಲ ಹಾಗೂ ಸಜ್ಜನರಿಗೆ ಅವರ ಸಹನೆಯೇ ಬಲ. ॥ ೭೫ ॥

**ವಾಕ್ಸಂಯಮೋ ಹಿ ನೃಪತೇ ಸುದುಷ್ಕರತಮೋ ಮತಃ ।**
**ಅರ್ಥವಚ್ಚ ವಿಚಿತ್ರಂ ಚ ನ ಶಕ್ಯಂ ಬಹು ಭಾಷಿತುಮ್ ॥ ೭೬ ॥**

ರಾಜನೇ ! ವಾಕ್ಸಂಯಮವು (ಹೆಚ್ಚು ಮಾತನಾಡದಿರುವುದು) ಬಹಳ ಕಷ್ಟವಾದುದು. ಅರ್ಥಪೂರ್ಣವಾಗಿ ಹಾಗೂ ಚಮತ್ಕಾರಪೂರ್ಣವಾಗಿ ಹೆಚ್ಚು ಮಾತನಾಡಲು ಸಾಧ್ಯವಿಲ್ಲ. ॥ ೭೬ ॥

**ಅಭ್ಯಾವಹತಿ ಕಲ್ಯಾಣಂ ವಿವಿಧಂ ವಾಕ್ ಸುಭಾಷಿತಾ ।**
**ಸೈವ ದುರ್ಭಾಷಿತಾ ರಾಜನ್ನನರ್ಥಾಯೋಪಪದ್ಯತೇ ॥ ೭೭ ॥**

ರಾಜನೇ ! ಮಧುರವಾದ ಶಬ್ದಗಳಿಂದ ಹೇಳಿದ ಮಾತು ಅನೇಕ ಪ್ರಕಾರಗಳಲ್ಲಿ ಮಂಗಳವನ್ನುಂಟುಮಾಡುತ್ತದೆ. ಆದರೆ ಅದೇ ಕಟು ಶಬ್ದಗಳಿಂದ ಹೇಳಲ್ಪಟ್ಟರೆ ಅದು ಮಹಾ ಅನರ್ಥಕ್ಕೆ ಕಾರಣವಾಗುತ್ತದೆ. ॥ ೭೭ ॥

**ರೋಹತೇ ಸಾಯಕೈರ್ವಿದ್ಧಂ ವನಂ ಪರಶುನಾ ಹತಮ್ ।**
**ವಾಚಾ ದುರುಕ್ತಂ ಬೀಭತ್ಸಂ ನ ಸಂರೋಹತಿ ವಾಕ್‌ಕ್ಷತಮ್ ॥ ೭೮ ॥**

ಬಾಣಗಳಿಂದ ಛೇದಿಸಲ್ಪಟ್ಟ ಅಥವಾ ಕೊಡಲಿಯಿಂದ ಕತ್ತರಿಸಲ್ಪಟ್ಟ ಅರಣ್ಯ ಪುನಃ ಬೆಳೆಯುತ್ತದೆ. ಆದರೆ ದುರುಕ್ತಿಗಳಿಂದ ಕೂಡಿದ ವಾಕ್ಪ್ರಹಾರ ಸಹಿಸಲಸಾಧ್ಯವಾದುದು. ॥ ೭೮ ॥

**ಕರ್ಣಿನಾಲೀಕನಾರಾಚಾನ್ನಿರ್ಹರಂತಿ ಶರೀರತಃ ।**
**ವಾಕ್‌ಶಲ್ಯಸ್ತು ನ ನಿರ್ಹರ್ತುಂ ಶಕ್ಯೋ ಹೃದಿಶಯೋ ಹಿ ಸಃ ॥ ೭೯ ॥**

ಶರೀರದೊಳಗೆ ಸೇರಿಕೊಂಡ ಕರ್ಣಾಕೃತಿಯ ಬಾಣಗಳನ್ನೂ (ಕರ್ಣಿ), ನಲೀ ಯಂತ್ರದಿಂದ ಪ್ರಯೋಗಿಸಿದ ಘೋರ ಬಾಣಗಳನ್ನೂ (ನಾಲೀಕ), ಕಬ್ಬಿಣದಿಂದ ಮಾಡಿ (ನಾರಾಚ) ಬಾಣಗಳನ್ನೂ ಉಪಾಯಾಂತರಗಳಿಂದ ಹೊರಕ್ಕೆ ತೆಗೆಯುತ್ತಾರೆ. ಆದ ಹೃದಯ ಗಹ್ವರದಲ್ಲಿ ಸೇರಿಕೊಂಡಿರುವ ವಾಕ್‌ಶಲ್ಯವನ್ನು ಹೊರಕ್ಕೆ ತೆಗೆಯಲು ಶಕ್ಯವೆ ಇಲ್ಲ. ॥ ೭೯ ॥

**ವಾಕ್ಸಾಯಕಾ ವದನಾನ್ನಿಷ್ಪತಂತಿ**
**ಯೈರಾಹತಃ ಶೋಚತಿ ರಾತ್ರ್ಯಹಾನಿ ।**
**ಪರಸ್ಯ ನಾಮರ್ಮಸು ತೇ ಪತಂತಿ**
**ತಾನ್ ಪಂಡಿತೋ ನಾವಸೃಜೇತ್ ಪರೇಭ್ಯಃ ॥ ೮೦ ॥**

ವಾಗ್ಬಾಣಗಳು ಮುಖದಿಂದ ಹೊರಟು ಬೇರೆಯವರ ಮರ್ಮಸ್ಥಳಗಳನ್ನು ಬಿಟ ಬೇರೆಡೆ ಬೀಳುವುದಿಲ್ಲ. ಆದರಿಂದ ಪ್ರಹೃತನಾದ ಮನುಷ್ಯನು ಹಗಲಿರುಳು ಯಾತನೆಯಿಂದ ದುಃಖಿಸುತ್ತಿರುತ್ತಾನೆ. ಆದುದರಿಂದ ಪಂಡಿತನಾದವನು ಇತರ ಮೇಲೆ ವಾಗ್ಬಾಣವನ್ನು ಪ್ರಯೋಗಿಸಬಾರದು. ॥ ೮೦ ॥

**ಯಸ್ಮೈ ದೇವಾಃ ಪ್ರಯಚ್ಛಂತಿ ಪುರುಷಾಯ ಪರಾಭವಮ್ ।**
**ಬುದ್ಧಿಂ ತಸ್ಯಾಪಕರ್ಷಂತಿ ಸೋಽವಾಚೀನಾನಿ ಪಶ್ಯತಿ ॥ ೮೧ ॥**

ದೇವತೆಗಳು ಯಾವಾತನಿಗೆ ಪರಾಭವವನ್ನು ಉಂಟುಮಾಡಲು ಇಚ್ಛಿಸುವರೋ ಅಂತಹವನ ಬುದ್ಧಿಯನ್ನು ಮೊದಲೇ ಸೆಳೆದುಕೊಂಡು ಬಿಡುತ್ತಾರೆ. ಅದರಿಂದಾಗಿ ಆ ನೀಚಕಾರ್ಯಗಳಲ್ಲಿಯೇ ನೆಟ್ಟಮನಸ್ಸುಳ್ಳವನಾಗಿರುತ್ತಾನೆ. ॥ ೮೧ ॥

**ಬುದ್ಧೌ ಕಲುಷಭೂತಾಯಾಂ ವಿನಾಶೇ ಪ್ರತ್ಯುಪಸ್ಥಿತೇ ।**
**ಅನಯೋ ನಯಸಂಕಾಶೋ ಹೃದಯಾನ್ನಾಪಸರ್ಪತಿ ॥ ೮೨ ॥**

ವಿನಾಶಕಾಲವು ಬಂದೊದಗಿದಾಗ ಬುದ್ಧಿಯು ಕಲುಷಿತವಾಗುತ್ತದೆ. ಆಗ ಸುನೀತಿಗೆ ಸಮಾನವಾಗಿಯೇ ತೋರುವ ಅನೀತಿಯು ಹೃದಯವನ್ನು ಬಿಟ್ಟು ಹೋಗುವುದಿಲ್ಲ. ॥ ೮೨ ॥

**ಸೇಯಂ ಬುದ್ಧಿಃ ಪರೀತಾ ತೇ ಪುತ್ರಾಣಾಂ ಭರತರ್ಷಭ ।**
**ಪಾಂಡವಾನಾಂ ವಿರೋಧೇನ ನ ಚೈನಾನವಬುದ್ಧ್ಯಸೇ ॥ ೮೩ ॥**

ಹೇ ಭರತರ್ಷಭ ! ಪಾಂಡವರ ಮೇಲಿನ ವಿರೋಧದಿಂದಾಗಿ ನಿನ್ನ ಮಕ್ಕಳ ಬುದ್ಧಿಯು ಕಲುಷಿತಗೊಂಡಿದೆ. ಆದರೆ ಈ ವಿಷಯವನ್ನು ನೀನು ಮನಗಂಡಿರುವು ದಿಲ್ಲ. ॥ ೮೩ ॥

**ರಾಜಾ ಲಕ್ಷಣಸಂಪನ್ನಸ್ತ್ರೈಲೋಕ್ಯಸ್ಯಾಪಿ ಯೋ ಭವೇತ್ ।**
**ಶಿಷ್ಯಸ್ತೇ ಶಾಸಿತಾ ಸೋಽಸ್ತು ಧೃತರಾಷ್ಟ್ರ ಯುಧಿಷ್ಠಿರಃ ॥ ೮೪ ॥**

ಮಹಾರಾಜ ! ಸರ್ವರಾಜಲಕ್ಷಣಗಳಿಂದಲೂ ಕೂಡಿರುವ, ಮೂರು ಲೋಕಗಳಿಗೂ ರಾಜನಾಗಲು ಅರ್ಹತೆಯನ್ನು ಪಡೆದಿರುವ, ನಿನ್ನ ಶಿಷ್ಯನಾದ (ನಿನಗೆ ಅತ್ಯಂತ ವಿಧೇಯನಾದ) ಯುಧಿಷ್ಠಿರನು ಈ ಅಖಂಡಸಾಮ್ರಾಜ್ಯಕ್ಕೆ ರಾಜನಾಗಲಿ. ॥ ೮೪ ॥

**ಅತೀತ್ಯ ಸರ್ವಾನ್ ಪುತ್ರಾಂಸ್ತೇ ಭಾಗಧೇಯಪುರಸ್ಕೃತಃ ।**
**ತೇಜಸಾ ಪ್ರಜ್ಞಯಾ ಚೈವ ಯುಕ್ತೋ ಧರ್ಮಾರ್ಥತತ್ತ್ವವಿತ್ ॥ ೮೫ ॥**

ಮೂರ್ಧಾಭಿಷಿಕ್ತನಾದ, ಧರ್ಮಾರ್ಥಗಳ ರಹಸ್ಯವನ್ನರಿತಿರುವ, ತೇಜಸ್ಸಿನಿಂದಲೂ, ಸುಪ್ರಜ್ಞೆಯಿಂದಲೂ ಕೂಡಿರುವ ಭಾಗ್ಯಶಾಲಿಯಾದ ಧರ್ಮಜನು ನಿನ್ನ ಮಕ್ಕಳೆಲ್ಲರನ್ನೂ ಮೀರಿಸಿದ್ದಾನೆ. ॥ ೮೫ ॥

**ಅನುಕ್ರೋಶಾದಾನೃಶಂಸ್ಯಾದ್ ಯೋಽಸೌ ಧರ್ಮಭೃತಾಂ ವರಃ ।**
**ಗೌರವಾತ್ ತವ ರಾಜೇಂದ್ರ ಬಹೂನ್ ಕ್ಲೇಶಾಂಸ್ತಿತಿಕ್ಷತಿ ॥ ೮೬ ॥**

ಧರ್ಮಿಷ್ಠರಲ್ಲಿ ಶ್ರೇಷ್ಠನೆನಿಸಿರುವ ಯುಧಿಷ್ಠಿರನು ತನ್ನಲ್ಲಿರುವ ದಯೆಯಿಂದಲೂ, ಕ್ರೌರ್ಯರಾಹಿತ್ಯದಿಂದಲೂ, ಮಿಗಿಲಾಗಿ ನಿನ್ನ ಬಗೆಗಿನ ಗೌರವಭಾವನೆಯಿಂದಾಗಿಯೂ ಅನೇಕ ವಿಧವಾದ ಕಷ್ಟಗಳನ್ನು ಸಹಿಸಿಕೊಳ್ಳುತ್ತಿದ್ದಾನೆ. ॥ ೮೬ ॥

ಇತಿ ಶ್ರೀಮಹಾಭಾರತೇ ಉದ್ಯೋಗಪರ್ವಣಿ ಪ್ರಜಾಗರಪರ್ವಣಿ
ವಿದುರನೀತಿವಾಕ್ಯೇ ಚತುಸ್ತ್ರಿಂಶೋಽಧ್ಯಾಯಃ ॥ ೩೪ ॥



# ಮೂರನೇ ಅಧ್ಯಾಯ

ಧೃತರಾಷ್ಟ್ರ ಉವಾಚ

**ಬ್ರೂಹಿ ಭೂಯೋ ಮಹಾಬುದ್ಧೇ ಧರ್ಮಾರ್ಥಸಹಿತಂ ವಚಃ ।**
**ಶೃಣ್ವತೋ ನಾಸ್ತಿ ಮೇ ತೃಪ್ತಿರ್ವಿಚಿತ್ರಾಣೀಹ ಭಾಷಸೇ ॥ ೧ ॥**

ಧೃತರಾಷ್ಟ್ರ ಹೇಳಿದನು – ಮಹಾಬುದ್ಧಿಯುಳ್ಳ ವಿದುರನೇ ! ಧರ್ಮಾರ್ಥಸಹಿತವಾ ಮಾತುಗಳನ್ನು ಪುನಃ ಹೇಳು. ಇದನ್ನು ಕೇಳುತ್ತಿರುವ ನನಗೆ ಸಾಕೆಂಬ ತೃಪ್ತಿಯೆ ಉಂಟಾಗುತ್ತಿಲ್ಲ. ಈ ವಿಷಯದಲ್ಲಿ ನೀನು ಅದ್ಭುತವಾಗಿ ಮಾತನಾಡುತ್ತಿರುವೆ. ॥ ೧ ॥

ವಿದುರ ಉವಾಚ

**ಸರ್ವತೀರ್ಥೇಷು ವಾ ಸ್ನಾನಂ ಸರ್ವಭೂತೇಷು ಚಾರ್ಜವಮ್ ।**
**ಉಭೇ ತ್ವೇತೇ ಸಮೇ ಸ್ಯಾತಾಮಾರ್ಜವಂ ವಾ ವಿಶಿಷ್ಯತೇ ॥ ೨ ॥**

ವಿದುರ ಹೇಳಿದನು – ಪ್ರಪಂಚದ ಸರ್ವಪುಣ್ಯತೀರ್ಥಗಳಲ್ಲಿಯೂ ಸ್ನಾನಮಾಡುವುದ ಮತ್ತು ಪ್ರಪಂಚದ ಎಲ್ಲ ಪ್ರಾಣಿಗಳ ವಿಷಯದಲ್ಲಿಯು ನಿಷ್ಕಪಟ ಸ್ನೇಹದಿಂದಿರುವುದು – ಈ ಎರಡು ಕಾರ್ಯಗಳೂ ಸಹ ಒಂದೆ ವಿಧವಾದ ಫಲವನ್ನು ನೀಡುತ್ತವೆ. ಅಥವಾ ನಿಷ್ಕಾಪಟ್ಯದಿಂದ ಕೂಡಿದ ಸ್ನೇಹವೇ ಹೆಚ ಮಹತ್ವಪೂರ್ಣ. ॥ ೨ ॥

**ಆರ್ಜವಂ ಪ್ರತಿಪದ್ಯಸ್ವ ಪುತ್ರೇಷು ಸತತಂ ವಿಭೋ ।**
**ಇಹ ಕೀರ್ತಿಂ ಪರಾಂ ಪ್ರಾಪ್ಯ ಪ್ರೇತ್ಯ ಸ್ವರ್ಗಮವಾಪ್ಸ್ಯಸಿ ॥ ೩ ॥**

ನಿನ್ನ ಪುತ್ರರ (ಕೌರವ-ಪಾಂಡವರ) ವಿಷಯದಲ್ಲಿ ಸರಳ – ನಿಷ್ಕಪಟ ವಾತ್ಸಲ್ಯದಿಂದ ಇರು. ಮಹಾರಾಜ ! ಹೀಗಿರುವುದರಿಂದ ನೀನು ಈ ಲೋಕದಲ ಅಪಾರವಾದ ಕೀರ್ತಿಯನ್ನು ಪಡೆಯುವೆಯಲ್ಲದೇ, ದೇಹಾವಸಾನಾನಂತರದಲ ಸುಖದಾಯಕವಾದ ಸ್ವರ್ಗಲೋಕವನ್ನೂ ಪಡೆಯುವೆ. ॥ ೩ ॥

**ಯಾವತ್ ಕೀರ್ತಿರ್ಮನುಷ್ಯಸ್ಯ ಪುಣ್ಯಾ ಲೋಕೇ ಪ್ರಗೀಯತೇ ।**
**ತಾವತ್ ಸ ಪುರುಷವ್ಯಾಘ್ರ ಸ್ವರ್ಗಲೋಕೇ ಮಹೀಯತೇ ॥ ೪ ॥**

ಪುರುಷಶ್ರೇಷ್ಠನೆ ! ಎಲ್ಲಿಯವರೆಗೆ ಮನುಷ್ಯನ ಸತ್ಕೀರ್ತಿಯು ಈ ಲೋಕದಲ್ಲಿ ಹಾಡಲ್ಪಡುತ್ತಿರುವುದೋ ಅಲ್ಲಿಯವರೆಗೂ ಅವನು ಸ್ವರ್ಗಲೋಕದಲ ಪ್ರತಿಷ್ಠಿತನಾಗಿರುತ್ತಾನೆ. ॥ ೪ ॥

**ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ ।**
**ವಿರೋಚನಸ್ಯ ಸಂವಾದಂ ಕೇಶಿನ್ಯರ್ಥೇ ಸುಧನ್ವನಾ ॥ ೫ ॥**

ಈ ವಿಷಯದಲ್ಲಿ ಪ್ರಾಚೀನ ಇತಿಹಾಸದ ಒಂದು ಉದಾಹರಣೆಯನ್ನು ಕೊಡುತ್ತಾರೆ. ಇದರಲ್ಲಿ 'ಕೇಶಿನಿ'ಗಾಗಿ ಸುಧನ್ವನೊಂದಿಗೆ ವಿರೋಚನನ ವಿವಾದದ ವರ್ಣನೆ ಇದೆ. ॥ ೫ ॥

**ಸ್ವಯಂವರೇ ಸ್ಥಿತಾ ಕನ್ಯಾ ಕೇಶಿನೀ ನಾಮ ನಾಮತಃ।**
**ರೂಪೇಣಾಪ್ರತಿಮಾ ರಾಜನ್ ವಿಶಿಷ್ಟಪತಿಕಾಮ್ಯಯಾ ॥ ೬ ॥**

ರಾಜನೇ ! ಒಂದೊಮ್ಮೆ, ಕೇಶಿನೀ ಎಂಬ ಹೆಸರಿನ ಅನುಪಮ ಸುಂದರಿಯಾದ ಕನ್ಯೆಯು ಸರ್ವಶ್ರೇಷ್ಠನಾದ ಪತಿಯನ್ನು ವರಿಸುವ ಅಭಿಲಾಷೆಯಿಂದ ಸ್ವಯಂವರ ಸಭೆಯಲ್ಲಿ ಉಪಸ್ಥಿತಳಿದ್ದಳು. ॥ ೬ ॥

**ವಿರೋಚನೋಽಥ ದೈತೇಯಸ್ತದಾ ತತ್ರಾಜಗಾಮ ಹ।**
**ಪ್ರಾಪ್ತುಮಿಚ್ಛಂಸ್ತತಸ್ತತ್ರ ದೈತ್ಯೇಂದ್ರಂ ಪ್ರಾಹ ಕೇಶಿನೀ ॥ ೭ ॥**

ಆ ಸಮಯದಲ್ಲಿ ದೈತ್ಯಕುಮಾರನಾದ ವಿರೋಚನನು ಆಕೆಯನ್ನು ಪಡೆಯುವ ಅಭಿಲಾಷೆಯಿಂದ ಅಲ್ಲಿಗೆ ಬಂದನು. ಆಗ ಕೇಶಿನಿಯು ಆ ದೈತ್ಯರಾಜನೊಂದಿಗೆ ಈ ರೀತಿಯಲ್ಲಿ ಮಾತನಾಡಿದಳು. ॥ ೭ ॥

**ಕೇಶಿನ್ಯುವಾಚ**

**ಕಿಂ ಬ್ರಾಹ್ಮಣಾಃ ಸ್ವಿಚ್ಛ್ರೇಯಾಂಸೋ ದಿತಿಜಾಃ ಸ್ವಿದ್ವಿರೋಚನ।**
**ಅಥ ಕೇನ ಸ್ಮ ಪರ್ಯಂಕಂ ಸುಧನ್ವಾ ನಾಧಿರೋಹತಿ ॥ ೮ ॥**

ಕೇಶಿನಿ ಹೇಳಿದಳು - ವಿರೋಚನ ! ಬ್ರಾಹ್ಮಣರು ಶ್ರೇಷ್ಠರೇ ? ದೈತ್ಯರು ಶ್ರೇಷ್ಠರೇ ? ಬ್ರಾಹ್ಮಣರೇ ಶ್ರೇಷ್ಠವೆಂದಾದಲ್ಲಿ ಬ್ರಾಹ್ಮಣನಾದ ಸುಧನ್ವನೇ ಏಕೆ ನನ್ನ ಮಂಚವನ್ನು ಹತ್ತುವುದಿಲ್ಲ? (ಸುಧನ್ವನನ್ನೇ ನಾನೇಕೆ ಮದುವೆಯಾಗಬಾರದು ?) ॥ ೮ ॥

**ವಿರೋಚನ ಉವಾಚ**

**ಪ್ರಾಜಾಪತ್ಯಾಸ್ತು ವೈ ಶ್ರೇಷ್ಠಾ ವಯಂ ಕೇಶಿನಿ ಸತ್ತಮಾಃ।**
**ಅಸ್ಮಾಕಂ ಖಲ್ವಿಮೇ ಲೋಕಾಃ ಕೇ ದೇವಾಃ ಕೇ ದ್ವಿಜಾತಯಃ ॥ ೯ ॥**

**ವಿರೋಚನ ಹೇಳಿದನು** - ಕೇಶಿನಿ ! ನಾವು ಪ್ರಜಾಪತಿಯ ಶ್ರೇಷ್ಠರಾದ ಮಕ್ಕಳು. ಆದ್ದರಿಂದ ಸರ್ವಶ್ರೇಷ್ಠರೆನಿಸಿದ್ದೇವೆ. ಈ ಸಕಲ ಲೋಕಗಳೂ ನಮ್ಮ ಸಲುವಾಗಿಯೇ ಇವೆ. ನಮ್ಮ ಮುಂದೆ ಆ ದೇವತೆಗಳೆಲ್ಲಿ? ಆ ಬ್ರಾಹ್ಮಣರೆಲ್ಲಿ? ॥ ೯ ॥

**ಕೇಶಿನ್ಯುವಾಚ**

**ಇಹೈವಾವಾಂ ಪ್ರತೀಕ್ಷಾವ ಉಪಸ್ಥಾನೇ ವಿರೋಚನ।**
**ಸುಧನ್ವಾ ಪ್ರಾತರಾಗಂತಾ ಪಶ್ಯೇಯಂ ವಾಂ ಸಮಾಗತೌ ॥ ೧೦ ॥**

**ಕೇಶಿನಿ ಹೇಳಿದಳು** - ವಿರೋಚನ ! ನಾವಿಬ್ಬರೂ ಇದೇ ಜಾಗದಲ್ಲಿಯೇ ಪ್ರತಿ ಮಾಡೋಣ. ನಾಳೆ ಬೆಳಿಗ್ಗೆ ಸುಧನ್ವನು ಇಲ್ಲಿಗೆ ಬರುತ್ತಾನೆ. ನೀವಿಬ್ಬರು ಜೊತೆಯ ಕುಳಿತಿರುವ ಸಮಯದಲ್ಲಿ ನಿಮ್ಮಿಬ್ಬರನ್ನು ನಾನು ನೋಡುತ್ತೇನೆ. ॥ ೧೦ ॥

**ವಿರೋಚನ ಉವಾಚ**

**ತಥಾ ಭದ್ರೇ ಕರಿಷ್ಯಾಮಿ ಯಥಾ ತ್ವಂ ಭೀರು ಭಾಷಸೇ ।**
**ಸುಧನ್ವಾನಂ ಚ ಮಾಂ ಚೈವ ಪ್ರಾತರ್ದ್ರಷ್ಟಾಸಿ ಸಂಗತೌ ॥ ೧೧ ॥**

**ವಿರೋಚನ ಹೇಳಿದನು** - ಹಾಗೆಯೇ ಆಗಲಿ ಕೇಶಿನಿ ! ನೀನು ಹೇಳಿದಂತೆಯೆ ನಾನು ಮಾಡುತ್ತೇನೆ. ನಾಳೆ ಬೆಳಿಗ್ಗೆ ಸುಧನ್ವ ಮತ್ತು ನಾನು ಒಂದೆಡೆ ಕುಳಿತಿರುವುದ ನೀನು ಕಾಣಬಹುದಾಗಿದೆ. ॥ ೧೧ ॥

**ವಿದುರ ಉವಾಚ**

**ಅತೀತಾಯಾಂ ಚ ಶರ್ವರ್ಯಾಮುದಿತೇ ಸೂರ್ಯಮಂಡಲೇ ।**
**ಅಥಾಜಗಾಮ ತಂ ದೇಶಂ ಸುಧನ್ವಾ ರಾಜಸತ್ತಮ ।**
**ವಿರೋಚನೋ ಯತ್ರ ವಿಭೋ ಕೇಶಿನ್ಯಾ ಸಹಿತಃ ಸ್ಥಿತಃ ॥ ೧೨ ॥**

**ವಿದುರ ಹೇಳಿದನು** - ರಾಜರಲ್ಲಿ ಶ್ರೇಷ್ಠನಾದ ಧೃತರಾಷ್ಟ್ರನೆ ! ಆ ರಾತ್ರಿಯ ಕಳೆದು ಸೂರ್ಯನ ಉದಯವಾದ ನಂತರ ವಿರೋಚನ ಕೇಶಿನಿಯರಿರುವ ಸ್ಥಳ ಸುಧನ್ವನ ಆಗಮನವಾಯಿತು. ॥ ೧೨ ॥

**ಸುಧನ್ವಾ ಚ ಸಮಾಗಚ್ಛತ್ ಪ್ರಹ್ಲಾದಿಂ ಕೇಶಿನೀಂ ತಥಾ ।**
**ಸಮಾಗತಂ ದ್ವಿಜಂ ದೃಷ್ಟ್ವಾ ಕೇಶಿನೀ ಭರತರ್ಷಭ ।**
**ಪ್ರತ್ಯುತ್ಥಾಯಾಸನಂ ತಸ್ಮೈ ಪಾದ್ಯಮರ್ಘ್ಯಂ ದದೌ ಪುನಃ ॥ ೧೩ ॥**

ಭರತಶ್ರೇಷ್ಠ ! ಸುಧನ್ವನು ಪ್ರಹ್ಲಾದನ ಕುಮಾರನಾದ ವಿರೋಚನ ಹಾಗು ಕೇಶಿನಿಯ ಬಳಿ ಬಂದನು. ಬ್ರಾಹ್ಮಣನ ಆಗಮನವನ್ನು ನೋಡಿ ಕೇಶಿನಿಯು ಎದ ನಿಂತು ಆತನಿಗೆ ಆಸನ, ಪಾದ್ಯ ಹಾಗೂ ಅರ್ಘ್ಯಗಳನ್ನು ಅರ್ಪಿಸಿದಳು. ॥ ೧೩ ॥

**ಸುಧನ್ವೋವಾಚ**

**ಅನ್ವಾಲಭೇ ಹಿರಣ್ಮಯಂ ಪ್ರಾಹ್ಲಾದೇ ತೇ ವರಾಸನಮ್ ।**
**ಏಕತ್ವಮುಪಸಂಪನ್ನೋ ನ ತ್ವಾಸೇಽಹಂ ತ್ವಯಾ ಸಹ ॥ ೧೪ ॥**

ಸುಧನ್ವನು ಹೇಳಿದನು - ಪ್ರಹ್ಲಾದನಂದನ ! ನಾನು ನಿನ್ನ ಈ ಸುವರ್ಣಮಯವಾದ ಸುಂದರ ಸಿಂಹಾಸನವನ್ನು ಕೇವಲ ಸ್ಪರ್ಶಿಸುವೆನು, ನಿನ್ನೊಂದಿ

ಇದರ ಮೇಲೆ ಕುಳಿತುಕೊಳ್ಳಲಾಗದು. ಏಕೆಂದರೆ ಹಾಗೆ ಕುಳಿತಲ್ಲಿ ನಾವಿಬ್ಬರೂ ಸಮಾನರಾಗುತ್ತೇವೆ. ॥ ೧೪ ॥

### ವಿರೋಚನ ಉವಾಚ

**ತವಾರ್ಹತೇ ತು ಫಲಕಂ ಕೂರ್ಚಂ ವಾಪ್ಯಥವಾ ಬೃಸೀ ।**
**ಸುಧನ್ವನ್ನ ತ್ವಮರ್ಹೋऽಸಿ ಮಯಾ ಸಹ ಸಮಾಸನಮ್ ॥ ೧೫ ॥**

ವಿರೋಚನನು ಹೇಳಿದನು - ಸುಧನ್ವನೇ ! ನಿನಗೆ ಮಣೆ, ದರ್ಭಾಸನ, ಚಾಪೆ ಅಥವಾ ಕೃಷ್ಣಾಜಿನ ಇತ್ಯಾದಿಗಳು ಮಾತ್ರವೇ ಯೋಗ್ಯವಾದವುಗಳು. ಅವನ್ನು ಬಿಟ್ಟು ನನ್ನೊಂದಿಗೆ ಸಮನಾಗಿ ಸಿಂಹಾಸನದಲ್ಲಿ ಕುಳಿತುಕೊಳ್ಳಲು ನೀನು ಅರ್ಹನೇ ಅಲ್ಲ. ॥ ೧೫ ॥

### ಸುಧನ್ವೋವಾಚ

**ಪಿತಾಪುತ್ರೌ ಸಹಾಸೀತಾಂ ದ್ವೌ ವಿಪ್ರೌ ಕ್ಷತ್ರಿಯಾವಪಿ ।**
**ವೃದ್ಧೌ ವೈಶ್ಯೌ ಚ ಶೂದ್ರೌ ಚ ನ ತ್ವನ್ಯಾವಿತರೇತರಮ್ ॥ ೧೬ ॥**

ಸುಧನ್ವನು ಹೇಳಿದನು - ತಂದೆ ಮತ್ತು ಮಗ, ಇಬ್ಬರು ಬ್ರಾಹ್ಮಣರು, ಇಬ್ಬರು ಕ್ಷತ್ರಿಯರು ಹಾಗೂ ವೃದ್ಧರಾದ ಇಬ್ಬರು ವೈಶ್ಯರು ಅಥವಾ ಶೂದ್ರರು ಒಂದೇ ಆಸನದಲ್ಲಿ ಕುಳಿತುಕೊಳ್ಳಬಹುದು. ಇದರ ಹೊರತಾಗಿ ಬೇರೆಯವರು ಏಕಾಸನದಲ್ಲಿ ಕುಳಿತುಕೊಳ್ಳಬಾರದು. ॥ ೧೬ ॥

**ಪಿತಾ ಹಿ ತೇ ಸಮಾಸೀನಮುಪಾಸೀತೈವ ಮಾಮಧಃ ।**
**ಬಾಲಃ ಸುಖೈಧಿತೋ ಗೇಹೇ ನ ತ್ವಂ ಕಿಂಚನ ಬುಧ್ಯಸೇ ॥ ೧೭ ॥**

ನಿನ್ನ ತಂದೆಯಾದರೋ ಕೆಳಗೆ ಕುಳಿತು ನನ್ನ ಸೇವೆಯನ್ನು ಮಾಡುತ್ತಾನೆ. ನೀನಿನ್ನೂ ಬಾಲಕ, ಮನೆಯಲ್ಲಿ ಸುಖವಾಗಿ ಬೆಳೆದಿರುವೆ. ಹಾಗಾಗಿ ನಿನಗೆ ಈ ವಿಷಯಗಳಲ್ಲಿ ಕಿಂಚಿತ್ತಾದರೂ ತಿಳುವಳಿಕೆ ಇಲ್ಲ. ॥ ೧೭ ॥

### ವಿರೋಚನ ಉವಾಚ

**ಹಿರಣ್ಯಂ ಚ ಗವಾಶ್ವಂ ಚ ಯದ್ವಿತ್ತಮಸುರೇಷು ನಃ ।**
**ಸುಧನ್ವನ್ ವಿಪಣೇ ತೇನ ಪ್ರಶ್ನಂ ಪೃಚ್ಛಾವ ಯೇ ವಿದುಃ ॥ ೧೮ ॥**

ವಿರೋಚನನು ಹೇಳಿದನು - ಸುಧನ್ವನೇ ! ರಾಕ್ಷಸರಾದ ನಮ್ಮಲ್ಲಿ ಬಂಗಾರ, ಹಸುಗಳು, ಕುದುರೆಗಳು ಮತ್ತು ಇತರ ಯಾವ ಸಂಪತ್ತುಗಳಿವೆಯೋ ಅವೆಲ್ಲವನ್ನೂ

ಪಣವಾಗಿಡುತ್ತೇನೆ. ಈ ವಿಷಯವನ್ನು ನಿಷ್ಪಕ್ಷವಾಗಿ ಯಾರು ತಿಳಿದಿರುತ್ತಾರೆಯೋ ಅ
ಸಮೀಪಕ್ಕೆ ನಾವಿಬ್ಬರೂ ಹೋಗಿ ಯಾರು ಶ್ರೇಷ್ಠರೆಂಬುದನ್ನು ನಿರ್ಧರಿಸೋಣ. ॥ ೧೮

### ಸುಧನ್ವೋವಾಚ

**ಹಿರಣ್ಯಂ ಚ ಗವಾಶ್ವಂ ಚ ತವೈವಾಸ್ತು ವಿರೋಚನ ।**
**ಪ್ರಾಣಯೋಸ್ತು ಪಣಂ ಕೃತ್ವಾ ಪ್ರಶ್ನಂ ಪೃಚ್ಛಾವ ಯೇ ವಿದುಃ ॥ ೧೯ ॥**

**ಸುಧನ್ವನು ಹೇಳಿದನು** - ಹಿರಣ್ಯಾದಿ ಐಶ್ವರ್ಯಗಳೆಲ್ಲವೂ ನಿನ್ನ ಬಳಿಯಲ್ಲಿ
ಇರಲಿ, ವಿರೋಚನ ! ನಮ್ಮಿಬ್ಬರ ಪ್ರಾಣಗಳನ್ನೇ ಪಣವಾಗಿಟ್ಟು, ತಿಳಿದವರಲ್ಲಿ
ವಿಷಯವನ್ನು ಪ್ರಶ್ನಿಸಿ ನಿರ್ಧರಿಸೋಣ. ॥ ೧೯ ॥

### ವಿರೋಚನ ಉವಾಚ

**ಆವಾಂ ಕುತ್ರ ಗಮಿಷ್ಯಾವಃ ಪ್ರಾಣಯೋರ್ವಿಪಣೇ ಕೃತೇ ।**
**ನ ತು ದೇವೇಷ್ವಹಂ ಸ್ಥಾತಾ ನ ಮನುಷ್ಯೇಷು ಕರ್ಹಿಚಿತ್ ॥ ೨೦ ॥**

ವಿರೋಚನನು ಹೇಳಿದನು - ಇದಾಗಬಹುದಾಗಿದೆ. ಆದರೆ ಪ್ರಾಣವ
ಪಣವಾಗಿಟ್ಟು ನಾವು ತೀರ್ಪಿಗಾಗಿ ಎಲ್ಲಿಗೆ ಹೋಗೋಣ ? ನಾನು ದೇವತೆಗಳ ಮು
ಬಂದು ನಿಲ್ಲತಕ್ಕವನಲ್ಲ. ಯಾವೊಬ್ಬ ಮಾನವನ ಮುಂದೆಯೂ ಸಹ ಬಂ
ನಿಲ್ಲತಕ್ಕವನಲ್ಲ. ॥ ೨೦ ॥

### ಸುಧನ್ವೋವಾಚ

**ಪಿತರಂ ತೇ ಗಮಿಷ್ಯಾವಃ ಪ್ರಾಣಯೋರ್ವಿಪಣೇ ಕೃತೇ ।**
**ಪುತ್ರಸ್ಯಾಪಿ ಸ ಹೇತೋರ್ಹಿ ಪ್ರಹ್ಲಾದೋ ನಾನೃತಂ ವದೇತ್ ॥ ೨೧ ॥**

**ಸುಧನ್ವನು ಹೇಳಿದನು** - ನಮ್ಮ ಪ್ರಾಣಗಳನ್ನೇ ಪಣವಾಗಿಟ್ಟು ನಾವಿಬ್ಬರೂ ನಿ
ತಂದೆಯ ಬಳಿಗೇ ಹೋಗೋಣ. ಪ್ರಹ್ಲಾದನು ತನ್ನ ಮಗನಿಗೋಸ್ಕರ ಎಂದೂ ಸುಳ್ಳ
ಹೇಳಲಾರನು ಎಂದು ನನಗೆ ವಿಶ್ವಾಸವಿದೆ. ॥ ೨೧ ॥

### ವಿದುರ ಉವಾಚ

**ಏವಂ ಕೃತಪಣೌ ಕ್ರುದ್ಧೌ ತತ್ರಾಭಿಜಗ್ಮತುಸ್ತದಾ ।**
**ವಿರೋಚನಸುಧನ್ವಾನೌ ಪ್ರಹ್ಲಾದೋ ಯತ್ರ ತಿಷ್ಠತಿ ॥ ೨೨ ॥**

**ವಿದುರನು ಹೇಳಿದನು** - ಈ ರೀತಿ ಪಣವನ್ನಿಟ್ಟುಕೊಂಡು ಪರಸ್ಪರ ಕ್ರುದ್ಧರಾ
ವಿರೋಚನ, ಸುಧನ್ವರೀರ್ವರೂ ಪ್ರಹ್ಲಾದನಿರುವಲ್ಲಿಗೆ ಹೋದರು. ॥ ೨೨ ॥

ಪ್ರಹ್ಲಾದ ಉವಾಚ

ಇಮೌ ತೌ ಸಂಪ್ರದೃಶ್ಯೇತೇ ಯಾಭ್ಯಾಂ ನ ಚರಿತಂ ಸಹ।
ಆಶೀವಿಷಾವಿವ ಕ್ರುದ್ಧಾವೇಕಮಾರ್ಗಾವಿಹಾಗತೌ ॥ ೨೩ ॥

ಪ್ರಹ್ಲಾದ (ಮನಸ್ಸಿನಲ್ಲಿಯೇ) ಅಂದುಕೊಂಡ - ಎಂದೂ ಜೊತೆಗೂಡಿ ಬರದ ಈ ವಿರೋಚನ-ಸುಧನ್ವರು ಇಂದು ಕೋಪಗೊಂಡ ವಿಷಸರ್ಪಗಳಂತೆ ಕುಪಿತರಾಗಿ ಒಂದೇ ದಾರಿಯಲ್ಲಿ ಬರುತ್ತಿರುವಂತೆ ಕಾಣುತ್ತಿದೆ. ॥ ೨೩ ॥

ಕಿಂ ವೈ ಸಹೈವಂ ಚರಥೋ ನ ಪುರಾ ಚರಥಃ ಸಹ।
ವಿರೋಚನೈತತ್ ಪೃಚ್ಛಾಮಿ ಕಿಂ ತೇ ಸಖ್ಯಂ ಸುಧನ್ವನಾ ॥ ೨೪ ॥

(ನಂತರ ಆತ ವಿರೋಚನನನ್ನು ಕುರಿತು ಹೇಳಿದನು -) ವಿರೋಚನ ! ನೀನು ಸುಧನ್ವನೊಡನೆ ಸ್ನೇಹಮಾಡಿಕೊಂಡೆಯೇನು ? ನೀವಿಬ್ಬರೂ ಒಟ್ಟಾಗಿ ಹೇಗೆ ಬಂದಿರುವಿರಿ ? ನೀವಿಬ್ಬರೂ ಹಿಂದೆ ಎಂದೂ ಜೊತೆಯಾಗಿ ಸಂಚರಿಸಿದವರೇ ಅಲ್ಲ. ॥ ೨೪ ॥

ವಿರೋಚನ ಉವಾಚ

ನ ಮೇ ಸುಧನ್ವನಾ ಸಖ್ಯಂ ಪ್ರಾಣಯೋರ್ವಿಪಣಾವಹೇ।
ಪ್ರಹ್ಲಾದ ತತ್ತ್ವಂ ಪೃಚ್ಛಾಮಿ ಮಾ ಪ್ರಶ್ನಮನೃತಂ ವದೇಃ ॥ ೨೫ ॥

ವಿರೋಚನನು ಹೇಳಿದನು - ತಂದೆಯೇ ! ಸುಧನ್ವನೊಡನೆ ನನಗೆ ಯಾವವಿಧವಾದ ಮೈತ್ರಿಯೂ ಇಲ್ಲ. ನಾವಿಬ್ಬರೂ ಪ್ರಾಣವನ್ನೇ ಪಣವಾಗಿಟ್ಟು ಇಲ್ಲಿಗೆ ಬಂದಿರುವೆವು. ನಾನು ನಿನ್ನನ್ನು ಕುರಿತು ಯಥಾರ್ಥವೇನೆಂಬುದನ್ನು ಕೇಳುವೆ. ನನ್ನ ಪ್ರಶ್ನೆಗೆ ಸುಳ್ಳು ತೀರ್ಪನ್ನು ನೀಡಬಾರದು. ॥ ೨೫ ॥

ಪ್ರಹ್ಲಾದ ಉವಾಚ

ಉದಕಂ ಮಧುಪರ್ಕಂ ವಾಪ್ಯಾನಯಂತು ಸುಧನ್ವನೇ !
ಬ್ರಹ್ಮನ್ನಭ್ಯರ್ಚನೀಯೋಽಸಿ ಶ್ವೇತಾ ಗೌಃ ಪೀವರೀ ಕೃತಾ ॥ ೨೬ ॥

ಪ್ರಹ್ಲಾದನು ಹೇಳಿದನು - ಸೇವಕರೆ ! ಸುಧನ್ವನಿಗೆ ಮಧುಪರ್ಕವನ್ನು ಹಾಗೂ ನೀರನ್ನು ತನ್ನಿರಿ. (ಸುಧನ್ವನಿಗೆ ಹೇಳಿದ -) ಬ್ರಹ್ಮನ್ ! ನೀನು ನನಗೆ ಪೂಜ್ಯನಾಗಿರುವೆ. ನಿನಗೆ ದಾನಮಾಡಲು ಬಿಳಿಯ ದೊಡ್ಡ ಹಸುವು ಸಿದ್ಧವಾಗಿದೆ. ॥ ೨೬ ॥

ಸುಧನ್ವೋವಾಚ

ಉದಕಂ ಮಧುಪರ್ಕಂ ಚ ಪಥಿಷ್ವೇವಾರ್ಪಿತಂ ಮಮ।
ಪ್ರಹ್ಲಾದ ತ್ವಂ ತು ಮೇ ತಥ್ಯಂ ಪ್ರಶ್ನಂ ಪ್ರಬ್ರೂಹಿ ಪೃಚ್ಛತಃ।
ಕಿಂ ಬ್ರಾಹ್ಮಣಾಃ ಸ್ವಿಚ್ಛ್ರೇಯಾಂಸ ಉತಾಹೋ ಸ್ವಿದ್ ವಿರೋಚನಃ ॥ ೨೭ ॥

ಸುಧನ್ವನು ಹೇಳಿದನು - ಮಹಾರಾಜ ಪ್ರಹ್ಲಾದ ! ನನಗೆ ನೀರು ಮತ ಮಧುಪರ್ಕವು ದಾರಿಯಲ್ಲಿಯೇ ಸಿಕ್ಕಿದೆ. ಪ್ರಶ್ನೆ ಕೇಳುತ್ತಿರುವ ನನಗೆ ನೀನ ನಿಶ್ಚಯವಾದ ಉತ್ತರವನ್ನೇ ಕೊಡಬೇಕು. ಬ್ರಾಹ್ಮಣರು ಶ್ರೇಷ್ಠರೇ ಅಥವಾ ವಿರೋಚನನು ಶ್ರೇಷ್ಠನೇ ? ॥ ೨೭ ॥

### ಪ್ರಹ್ಲಾದ ಉವಾಚ

**ಪುತ್ರ ಏಕೋ ಮಮ ಬ್ರಹ್ಮಂಸ್ತ್ವಂ ಚ ಸಾಕ್ಷಾದಿಹಾಸ್ಥಿತಃ ।**
**ತಯೋರ್ವಿವದತೋಃ ಪ್ರಶ್ನಂ ಕಥಮಸ್ಮದ್ವಿಧೋ ವದೇತ್ ॥ ೨೮ ॥**

**ಪ್ರಹ್ಲಾದನು ಹೇಳಿದನು** - ಬ್ರಾಹ್ಮಣೋತ್ತಮನೆ ! ನನಗಿರುವವನು ಒಬ್ಬನೇ ಮಗ ನೀನಾದರೋ ಸಾಕ್ಷಾತ್ತಾಗಿ ನನ್ನಲ್ಲಿಗೆ ಬಂದಿರುತ್ತೀಯೆ. ನೀವಿಬ್ಬರೂ ವಿವಾದಮಾಡಿಕೊಂಡು ನನ್ನಲ್ಲಿಗೆ ಬಂದು ತೀರ್ಪನ್ನು ಕೇಳಿದರೆ ನನ್ನಂತಹವನ ಉತ್ತರಕೊಡಲು ಹೇಗೆ ತಾನೇ ಸಾಧ್ಯವಾಗುವುದು ? ॥ ೨೮ ॥

### ಸುಧನ್ವೋವಾಚ

**ಗಾಂ ಪ್ರದದ್ಯಾಸ್ತ್ವೌರಸಾಯ ಯದ್ವಾನ್ಯತ್ ಸ್ಯಾತ್ ಪ್ರಿಯಂ ಧನಮ್ ।**
**ದ್ವಯೋರ್ವಿವದತೋಸ್ತಥ್ಯಂ ವಾಚ್ಯಂ ಚ ಮತಿಮಂಸ್ತ್ವಯಾ ॥ ೨೯ ॥**

**ಸುಧನ್ವನು ಹೇಳಿದನು** - ನಿನ್ನ ಔರಸಪುತ್ರನಾದ ವಿರೋಚನನಿಗೆ ನಿನ್ನಲ್ಲಿರುವ ಗೋವು ಹಾಗೂ ಇನ್ನಿತರ ಐಶ್ವರ್ಯವೇನಿದ್ದರೂ ಕೊಟ್ಟುಬಿಡು. ಆದರೆ ಮತಿಮನ್ ! ವಿವಾದಮಾಡಿಕೊಂಡು ತೀರ್ಪಿಗಾಗಿ ನಿನ್ನ ಬಳಿಗೆ ಬಂದಿರುವ ನಮ್ಮ ಪ್ರಶ್ನೆಗೆ ನೀನು ನಿಜವಾದ ಉತ್ತರವೀಯಲೇಬೇಕು. ॥ ೨೯ ॥

### ಪ್ರಹ್ಲಾದ ಉವಾಚ

**ಅಥ ಯೋ ನೈವ ಪ್ರಬ್ರೂಯಾತ್ ಸತ್ಯಂ ವಾ ಯದಿ ವಾನೃತಮ್ ।**
**ಏತತ್ ಸುಧನ್ವನ್ ಪೃಚ್ಛಾಮಿ ದುರ್ವಿವಕ್ತಾ ಸ್ಮ ಕಿಂ ವಸೇತ್ ॥ ೩೦ ॥**

**ಪ್ರಹ್ಲಾದನು ಹೇಳಿದನು** - ಸುಧನ್ವನ್ ! ನಾನು ಈ ಮಾತನ್ನು ನಿನ್ನಲ್ಲಿ ಕೇಳುತ್ತಿರುವೆ - ತೀರ್ಪುಗಾರನು ಅನ್ಯಾಯವಾದ ತೀರ್ಪನ್ನಿತ್ತರೆ , ಆ ದುಷ್ಟ ವ್ಯಕ್ತಿಗೆ ಪ್ರಾಪ್ತವಾಗುವ ಸ್ಥಿತಿ ಯಾವುದು ? ॥ ೩೦ ॥

### ಸುಧನ್ವೋವಾಚ

**ಯಾಂ ರಾತ್ರಿಮಧಿವಿನ್ನಾ ಸ್ತ್ರೀ ಯಾಂ ಚೈವಾಕ್ಷಪರಾಜಿತಃ ।**
**ಯಾಂ ಚ ಭಾರಾಭಿತಪ್ತಾಂಗೋ ದುರ್ವಿವಕ್ತಾ ಸ್ಮ ತಾಂ ವಸೇತ್ ॥ ೩೧ ॥**

**ಸುಧನ್ವನು ಹೇಳಿದನು** - ರಾತ್ರಿ ತನ್ನ ಗಂಡನು ಸಪತ್ನಿಯೊಡನಿರುವುದನ್ನು ನೋಡಿದ ಸ್ತ್ರೀಗೆ ಆಗುವ ಸಂಕಟ, ಪಗಡೆಯಾಟದಲ್ಲಿ ಸರ್ವಸ್ವವನ್ನೂ ಕಳೆದುಕೊಂಡವನ ಮನಸ್ಸಿನ ಯಾತನೆ, ಮಹತ್ತರ ಆಪತ್ತಿಗೊಳಗಾದವ ಭಾರವಾದ ಮನಸ್ಸಿನಿಂದ ಕೂಡಿ ಅನುಭವಿಸುವ ಪರಿತಾಪ. ಈ ಬಗೆಯ ಸ್ಥಿತಿಯನ್ನೇ ಅನ್ಯಾಯವಾದ ತೀರ್ಪನ್ನಿತ್ತವ ಪಡೆಯುತ್ತಾನೆ. ॥ ೩೧ ॥

**ನಗರೇ ಪ್ರತಿರುದ್ಧಃ ಸನ್ ಬಹಿರ್ದ್ವಾರೇ ಬುಭುಕ್ಷಿತಃ ।**
**ಅಮಿತ್ರಾನ್ ಭೂಯಸಃ ಪಶ್ಯೇದ್ ಯಃ ಸಾಕ್ಷ್ಯಮನೃತಂ ವದೇತ್ ॥ ೩೨ ॥**

ನಗರದ ಹೊರಬಾಗಿಲಲ್ಲಿ ತಡೆಯಲ್ಪಟ್ಟು, ಹೊರಬಾಗಿಲಲ್ಲಿ ಹಸಿವಿನಿಂದ ಬಳಲಿ ಎಲ್ಲೆಡೆಯೂ ಶತ್ರುಗಳಿಂದ ಬಾಧಿಸಲ್ಪಟ್ಟವನ ದುಃಖವನ್ನು ಅನ್ಯಾಯದ ತೀರ್ಪನ್ನಿತ್ತವನು ಪಡೆಯುತ್ತಾನೆ. ॥ ೩೨ ॥

**ಪಂಚ ಪಶ್ವನೃತೇ ಹಂತಿ ದಶ ಹಂತಿ ಗವಾನೃತೇ ।**
**ಶತಮಶ್ವಾನೃತೇ ಹಂತಿ ಸಹಸ್ರಂ ಪುರುಷಾನೃತೇ ॥ ೩೩ ॥**

ಪಶುವಿಗಾಗಿ (ಕುರಿ, ಮೇಕೆ, ನಾಯಿ ಮುಂ.) ಸುಳ್ಳು ಹೇಳುವುದರಿಂದ ಐದುತಲೆಮಾರಿನವರು, ಹಸಿವಿಗಾಗಿ ಸುಳ್ಳು ಹೇಳುವುದರಿಂದ ಹತ್ತು ತಲೆಮಾರಿನವರು, ಕುದುರೆಗಾಗಿ ಸುಳ್ಳು ಹೇಳುವುದರಿಂದ ನೂರು ತಲೆಮಾರಿನವರು, ಮನುಷ್ಯನಿಗಾಗಿ ಸುಳ್ಳು ಹೇಳುವುದರಿಂದ ವ್ಯಕ್ತಿಯ ಸಾವಿರ ತಲೆಮಾರಿನವರು ನರಕಕ್ಕೆ ಬೀಳುತ್ತಾರೆ. ॥ ೩೩ ॥

**ಹಂತಿ ಜಾತಾನಜಾತಾಂಶ್ಚ ಹಿರಣ್ಯಾರ್ಥೇಽನೃತಂ ವದನ್ ।**
**ಸರ್ವಂ ಭೂಮ್ಯನೃತೇ ಹಂತಿ ಮಾ ಸ್ಮ ಭೂಮ್ಯನೃತಂ ವದೇಃ ॥ ೩೪ ॥**

ಸುವರ್ಣದ ಕಾರಣದಿಂದ ಸುಳ್ಳು ಹೇಳುವುದರಿಂದ ವ್ಯಕ್ತಿಯ ವಂಶದಲ್ಲಿ ಹಿಂದೆ ಹುಟ್ಟಿದ್ದವರೂ ಮುಂದೆ ಹುಟ್ಟುವವರೂ ಅಧೋಗತಿಯನ್ನು ಹೊಂದುತ್ತಾರೆ. ಭೂಮಿಯ ವಿಷಯವಾಗಿ ಸುಳ್ಳು ಹೇಳಿದರೆ ಸರ್ವನಾಶವಾಗುತ್ತದೆ. ಆದುದರಿಂದ ಭೂಮಿಯ ವಿಷಯವಾಗಿ ಖಂಡಿತವಾಗಿಯೂ ಸುಳ್ಳನ್ನು ಹೇಳಬೇಡ. ॥ ೩೪ ॥

**ಪ್ರಹ್ಲಾದ ಉವಾಚ**

**ಮತ್ತಃ ಶ್ರೇಯಾನಂಗಿರಾ ವೈ ಸುಧನ್ವಾ ತ್ವದ್ವಿರೋಚನ ।**
**ಮಾತಾಸ್ಯ ಶ್ರೇಯಸೀ ಮಾತುಸ್ತಸ್ಮಾತ್ತ್ವಂ ತೇನ ವೈ ಜಿತಃ ॥ ೩೫ ॥**

**ಪ್ರಹ್ಲಾದನು ಹೇಳಿದನು** - ವಿರೋಚನ ! ಸುಧನ್ವನ ತಂದೆಯಾದ ಅಂಗಿರನು ನನಗಿಂತಲೂ ಶ್ರೇಷ್ಠನಾದವನು. ಸುಧನ್ವನು ನಿನಗಿಂತಲೂ ಶ್ರೇಷ್ಠನು, ಇವನ

ತಾಯಿಯೂ ಕೂಡಾ ನಿನ್ನ ತಾಯಿಗಿಂತಲೂ ಶ್ರೇಷ್ಠಳಾದವಳು. ಆದ್ದರಿಂದ ನೀನಿಂದು ಸುಧನ್ವನಿಂದ ಪರಾಜಿತಗೊಂಡಿರುವೆ. ॥ ೩೫ ॥

**ವಿರೋಚನ ಸುಧನ್ವಾಯಂ ಪ್ರಾಣಾನಾಮೀಶ್ವರಸ್ತವ ।**
**ಸುಧನ್ವನ್ ಪುನರಿಚ್ಛಾಮಿ ತ್ವಯಾ ದತ್ತಂ ವಿರೋಚನಮ್ ॥ ೩೬ ॥**

'ವಿರೋಚನ ! ಈ ಸುಧನ್ವನೀಗ ನಿನ್ನ ಪ್ರಾಣಗಳಿಗೆ ಒಡೆಯನಾಗಿರುತ್ತಾನೆ'. 'ಸುಧನ್ವನ್ ! ನಿನ್ನಿಂದ ದಾನವಾಗಿ ಕೊಡಲ್ಪಡುವ ವಿರೋಚನನನ್ನು ಪುನ ಪಡೆದುಕೊಳ್ಳಲಿಚ್ಛಿಸುತ್ತೇನೆ'. (ವಿರೋಚನನ ಪ್ರಾಣದಾನ ಮಾಡು.) ॥ ೩೬ ॥

**ಸುಧನ್ವೋವಾಚ**

**ಯದ್ಧರ್ಮಮವೃಣೀಥಾಸ್ತ್ವಂ ನ ಕಾಮಾದನೃತಂ ವದೀಃ ।**
**ಪುನರ್ದದಾಮಿ ತೇ ಪುತ್ರಂ ಯಸ್ಮಾತ್ ಪ್ರಹ್ಲಾದ ದುರ್ಲಭಮ್ ॥ ೩೭ ॥**

ಸುಧನ್ವನು ಹೇಳಿದನು – ಪ್ರಹ್ಲಾದ ! ನೀನು (ಇಂತಹ ಸಂದಿಗ್ಧಸಮಯದಲ್ಲಿಯೂ ಸಹ) ಧರ್ಮಮಾರ್ಗವನ್ನೇ ಪರಿಗ್ರಹಿಸಿರುವೆ. ಸ್ವಾರ್ಥಾಭಿಲಾಷೆಯಿಂದಾಗಿ ಸುಳ್ಳನ್ನು ಹೇಳಿರುವುದಿಲ್ಲ. ಆದುದರಿಂದ ದುರ್ಲಭನಾದ ಪುತ್ರನನ್ನು ನಿನಗೆ ಪುನಃ ಕೊಟ್ಟುಬಿಡುತ್ತೇನೆ. ॥ ೩೭ ॥

**ಏಷ ಪ್ರಹ್ಲಾದ ಪುತ್ರಸ್ತೇ ಮಯಾ ದತ್ತೋ ವಿರೋಚನಃ ।**
**ಪಾದಪ್ರಕ್ಷಾಲನಂ ಕುರ್ಯಾತ್ ಕುಮಾರ್ಯಾಃ ಸಂನಿಧೌ ಮಮ ॥ ೩೮ ॥**

ಪ್ರಹ್ಲಾದ ! ನನ್ನಿಂದ ಪುನಃ ಕೊಡಲ್ಪಟ್ಟ ಈ ನಿನ್ನ ಪುತ್ರನಾದ ವಿರೋಚನನು ಕುಮಾರಿಯಾದ ಕೇಶಿನಿಯ ಸಮ್ಮುಖದಲ್ಲಿ ನನ್ನ ಕಾಲನ್ನು ತೊಳೆಯಬೇಕು. ॥ ೩೮ ॥

**ವಿದುರ ಉವಾಚ**

**ತಸ್ಮಾದ್ ರಾಜೇಂದ್ರ ಭೂಮ್ಯರ್ಥೇ ನಾನೃತಂ ವಕ್ತುಮರ್ಹಸಿ ।**
**ಮಾ ಗಮಃ ಸಸುತಾಮಾತ್ಯೋ ನಾಶಂ ಪುತ್ರಾರ್ಥಮಬ್ರುವನ್ ॥ ೩೯ ॥**

**ವಿದುರನು ಹೇಳಿದನು** – ಆದ್ದರಿಂದ ರಾಜೇಂದ್ರ ! ಭೂಮಿಗಾಗಿ ಸುಳ್ಳನ್ನು ಹೇಳಬೇಡ. ಪುತ್ರಮೋಹಕ್ಕೊಳಗಾಗಿ ಅಸತ್ಯವನ್ನು ಹೇಳಿ ಮಕ್ಕಳು – ಮಂತ್ರಿ ಸಹಿತನಾಗಿ ವಿನಾಶವನ್ನು ಹೊಂದಬೇಡ. ॥ ೩೯ ॥

**ನ ದೇವಾ ದಂಡಮಾದಾಯ ರಕ್ಷಂತಿ ಪಶುಪಾಲವತ್ ।**
**ಯಂ ತು ರಕ್ಷಿತುಮಿಚ್ಛಂತಿ ಬುದ್ಧ್ಯಾ ಸಂವಿಭಜಂತಿ ತಮ್ ॥ ೪೦ ॥**

ದೇವತೆಗಳು ದಂಡವನ್ನು ಹಿಡಿದು ಪಶುಪಾಲಕನಂತೆ ಧರ್ಮಿಷ್ಠರ ರಕ್ಷಣೆಗಾಗಿ

ಬರುವುದಿಲ್ಲ. ಯಾವನನ್ನು ರಕ್ಷಿಸಲು ಇಚ್ಛಿಸುತ್ತಾರೆಯೋ ಅಂತಹವನನ್ನು ಸುಬುದ್ಧಿಯಿಂದ ಯೋಜಿಸುತ್ತಾರೆ. (ಒಳ್ಳೆಯ ಬುದ್ಧಿಯನ್ನು ಕೊಡುತ್ತಾರೆ) ॥ ೪೦ ॥

**ಯಥಾ ಯಥಾ ಹಿ ಪುರುಷಃ ಕಲ್ಯಾಣೇ ಕುರುತೇ ಮನಃ ।**
**ತಥಾ ತಥಾಸ್ಯ ಸರ್ವಾರ್ಥಾಃ ಸಿದ್ಧ್ಯಂತೇ ನಾತ್ರ ಸಂಶಯಃ ॥ ೪೧ ॥**

ಮಾನವನ ಮನಸ್ಸು ಶುಭಕಾರ್ಯಗಳೆಡೆಗೆ ಪ್ರವಹಿಸುತ್ತ ಹೋದಂತೆ ಅವನಿಗೆ ಸರ್ವಾರ್ಥಗಳೂ ಸಿದ್ಧಿಸುತ್ತವೆ. ಇದರಲ್ಲಿ ಲೇಶ ಮಾತ್ರ ಸಂಶಯವೂ ಇರುವುದಿಲ್ಲ. ॥ ೪೧ ॥

**ನೈನಂ ಛಂದಾಂಸಿ ವೃಜಿನಾತ್ ತಾರಯಂತಿ**
**ಮಾಯಾವಿನಂ ಮಾಯಯಾ ವರ್ತಮಾನಮ್ ।**
**ನೀಡಂ ಶಕುಂತಾ ಇವ ಜಾತಪಕ್ಷಾ-**
**ಶ್ಛಂದಾಂಸ್ಯೇನಂ ಪ್ರಜಹತ್ಯಂತಕಾಲೇ ॥ ೪೨ ॥**

ಕಪಟತೆಯಿಂದ ಕೂಡಿದ ವ್ಯವಹಾರವನ್ನಿಟ್ಟುಕೊಂಡಿರುವ ದುಷ್ಟವ್ಯಕ್ತಿಯನ್ನು ವೇದವು ಆವನೆಲ್ಲ ಪಾಪಗಳಿಂದ ಮುಕ್ತಿಗೊಳಿಸುವುದಿಲ್ಲ. ರೆಕ್ಕೆ ಬೆಳೆದ ನಂತರ ಪಕ್ಷಿಗಳು ಗೂಡನ್ನು ಬಿಟ್ಟು ಹೋಗುವಂತೆ ವೇದಗಳು ಆ ರೀತಿಯ ಮನುಷ್ಯನನ್ನು ಅಂತ್ಯಕಾಲದಲ್ಲಿ ಬಿಟ್ಟುಹೋಗುತ್ತವೆ. ॥ ೪೨ ॥

**ಮದ್ಯಪಾನಂ ಕಲಹಂ ಪೂಗವೈರಂ**
**ಭಾರ್ಯಾಪತ್ಯೋರಂತರಂ ಜ್ಞಾತಿಭೇದಮ್ ।**
**ರಾಜದ್ವಿಷ್ಟಂ ಸ್ತ್ರೀಪುಂಸಯೋರ್ವಿವಾದಂ**
**ವರ್ಜ್ಯಾನ್ಯಾಹುರ್ಯಶ್ಚ ಪಂಥಾಃ ಪ್ರದುಷ್ಟಃ ॥ ೪೩ ॥**

ಮದ್ಯಪಾನ ಮಾಡುವುದು, ವ್ಯಾಜ್ಯ, ಸಮೂಹದೊಂದಿಗೆ ದ್ವೇಷಕಟ್ಟಿಕೊಳ್ಳುವುದು, ಪತಿ-ಪತ್ನಿಯರಲ್ಲಿ ವಿರಸವನ್ನುಂಟು ಮಾಡುವುದು, (ಅಣ್ಣ-ತಮ್ಮಂದಿರಲ್ಲಿ) ಭಾಂದವರಲ್ಲಿ ದ್ವೇಷವನ್ನು ಹುಟ್ಟಿಸುವುದು, ರಾಜದ್ವೇಷ, ಸ್ತ್ರೀ-ಪುರುಷರೊಡನೆ ವಿವಾದ, ಹಾಗೂ ಇನ್ನಿತರ ಪಾಪಕ್ಕೊಯ್ಯುವ ಮಾರ್ಗ - ಇವುಗಳನ್ನು ವರ್ಜಿಸಬೇಕೆಂದು ಹಿರಿಯರು ಹೇಳುತ್ತಾರೆ. ॥ ೪೩ ॥

**ಸಾಮುದ್ರಿಕಂ ವಣಿಜಂ ಚೋರಪೂರ್ವಂ**
**ಶಲಾಕಧೂರ್ತಂ ಚ ಚಿಕಿತ್ಸಕಂ ಚ ।**
**ಅರಿಂ ಚ ಮಿತ್ರಂ ಚ ಕುಶೀಲವಂ ಚ**
**ನೈತಾನ್ ಸಾಕ್ಷ್ಯೇ ತ್ವಧಿಕುರ್ವೀತ ಸಪ್ತ ॥ ೪೪ ॥**

ಸಾಮುದ್ರಿಕಶಾಸ್ತ್ರದಿಂದ ಬದುಕುವವ, ಕಳ್ಳತನ ಮಾಡಿ ವ್ಯಾಪಾರ ಮಾಡುವವ ಕಡ್ಡಿ ಹಿಡಿದು ಭವಿಷ್ಯಹೇಳಿ ವಂಚಿಸುವವ, ವೈದ್ಯ, ಶತ್ರು, ಸ್ನೇಹಿತ ಹಾಗೂ ನರ್ತ (ಗಾಯಕ)– ಈ ಏಳು ಮಂದಿಯನ್ನು ಸಾಕ್ಷ್ಯ ಹೇಳಲು ಕರೆಯಬಾರದು. ॥ ೪೪ ॥

**ಮಾನಾಗ್ನಿಹೋತ್ರಮುತ ಮಾನಮೌನಂ**
**ಮಾನೇನಾಧೀತಮುತ ಮಾನಯಜ್ಞಃ ।**
**ಏತಾನಿ ಚತ್ವಾರ್ಯಭಯಂಕರಾಣಿ**
**ಭಯಂ ಪ್ರಯಚ್ಛಂತ್ಯಯಥಾಕೃತಾನಿ ॥ ೪೫ ॥**

ಶ್ರದ್ಧಾಪೂರ್ವಕವಾಗಿ ಮಾಡಿದ ಅಗ್ನಿಹೋತ್ರ, ಶ್ರದ್ಧಾಪೂರ್ವಕವಾಗಿ ಮಾಡಿ ಮೌನವ್ರತ, ಶ್ರದ್ಧಾಪೂರ್ವಕವಾಗಿ ಮಾಡಿದ ವೇದಾಧ್ಯಯನ, ಶ್ರದ್ಧಾಪೂರ್ವಕವಾಗಿ ಮಾಡಿ ಯಜ್ಞ – ಈ ನಾಲ್ಕು ಕರ್ಮಗಳು ಮಾನವನಿಗೆ ಅಭಯದಾಯಕವಾಗಿರುತ್ತವೆ. ಈ ನಾಲ ಕರ್ಮಗಳನ್ನೇ ಅಶ್ರದ್ಧೆಯಿಂದಲೂ ಅಹಂಕಾರದಿಂದಲೂ ಮಾಡಿದರೆ, ವಿಧಿಪೂರ್ವಕವಾ ಮಾಡದಿದ್ದರೆ ಅವು ಭಯವನ್ನುಂಟು ಮಾಡುತ್ತವೆ. ॥ ೪೫ ॥

**ಅಗಾರದಾಹೀ ಗರದಃ ಕುಂಡಾಶೀ ಸೋಮವಿಕ್ರಯೀ ।**
**ಪರ್ವಕಾರಶ್ಚ ಸೂಚೀ ಚ ಮಿತ್ರಧ್ರುಕ್ ಪಾರದಾರಿಕಃ ॥ ೪೬ ॥**
**ಭ್ರೂಣಹಾ ಗುರುತಲ್ಪೀ ಚ ಯಶ್ಚ ಸ್ಯಾತ್ ಪಾನಪೋ ದ್ವಿಜಃ ।**
**ಅತಿತೀಕ್ಷ್ಣಶ್ಚ ಕಾಕಶ್ಚ ನಾಸ್ತಿಕೋ ವೇದನಿಂದಕಃ ॥ ೪೭ ॥**
**ಸ್ರುವಪ್ರಗ್ರಹಣೋ ವ್ರಾತ್ಯಃ ಕೀನಾಶಶ್ಚಾತ್ಮವಾನಪಿ ।**
**ರಕ್ಷೇತ್ಯುಕ್ತಶ್ಚ ಯೋ ಹಿಂಸ್ಯಾತ್ ಸರ್ವೇ ಬ್ರಹ್ಮಹಭಿಃ ಸಮಾಃ ॥ ೪೮ ॥**

ಮನೆಯನ್ನು ಸುಡುವವನು, ವಿಷಹಾಕುವವನು, ಕುಂಡದ ಅನ್ನವನ್ನು ತಿನ್ನುವವನ (ಪತಿಯು ಬದುಕಿದ್ದಾಗಲೇ ಅನ್ಯಪುರುಷನಿಂದ ಪಡೆದ ಮಗನಿಗೆ ಕುಂಡನೆಂದು ಹೆಸರು ಅಂತಹವನ ಅನ್ನವನ್ನು ತಿನ್ನುವವನು ಕುಂಡಾಶೀ.) ಸೋಮಲತೆಯನ್ನು ಮಾರುವವನು ಶಸ್ತ್ರಗಳನ್ನು ಮಾಡುವವನು, ಚಾಡಿ ಹೇಳುವವನು ಅಥವಾ ಮುಂದೇನಾಗುವುದೆಂಬ ಸೂಚನೆ ಕೊಡುವ ಜ್ಯೋತಿಷಿ, ಮಿತ್ರದ್ರೋಹಿ, ಪರಸ್ತ್ರೀಲಂಪಟ. ಭ್ರೂಣಹತ್ಯೆಯನ್ನ ಮಾಡುವವನು, ಗುರುತಲ್ಪಗ (ಗುರುಪತ್ನಿಯನ್ನು ಕಾಮಿಸುವವನು), ಬ್ರಾಹ್ಮಣನಾಗಿದ್ದುಕೊಂಡು ಹೆಂಡಕುಡಿಯುವವನು, ಅತ್ಯುಗ್ರಸ್ವಭಾವದವನು, ಕಾಗೆಯಂತೆ ಸರ್ವದಾ ಕೂಗಿಕೊಳ್ಳುತ್ತಿರುವವನು, ನಾಸ್ತಿಕನು, ವೇದವನ್ನು ದೂಷಿಸತಕ್ಕವನು, ಗ್ರಾಮಪುರೋಹಿತ, ವ್ರಾತ್ಯ (ಶೂದ್ರಪುರುಷನಿಂದ ಕ್ಷತ್ರಿಯಸ್ತ್ರೀಯಲ್ಲಿ ಹುಟ್ಟಿದವನು / ಉಪನಯನ ಸಂಸ್ಕಾರದ ಮೂಲಕವಾಗಿ ಯಜ್ಞೋಪವೀತವನ್ನು ಧರಿಸದೇ ಇರತಕ್ಕ ದ್ವಿಜ)

ಕೃಪಣ ಅಥವಾ ರಹಸ್ಯದಲ್ಲಿ ಕೊಲೆ ಮಾಡುವವನು, ರಕ್ಷಿಸೆಂದು ಆಶ್ರಯ ಪಡೆಯಲು ಬಂದವನನ್ನು ರಕ್ಷಿಸಲು ಸಮರ್ಥನಾಗಿದ್ದರೂ ಸಹ ಹಿಂಸೆಗೊಳಪಡಿಸತಕ್ಕವನು - ಇವರೆಲ್ಲರೂ ಬ್ರಹ್ಮಹತ್ಯೆ ಮಾಡಿದವರಿಗೆ ಸಮಾನರೆನಿಸುತ್ತಾರೆ. ॥ ೪೬, ೪೭, ೪೮ ॥

**ತೃಣೋಲ್ಕಯಾ ಜ್ಞಾಯತೇ ಜಾತರೂಪಂ**
**ವೃತ್ತೇನ ಭದ್ರೋ ವ್ಯವಹಾರೇಣ ಸಾಧುಃ ।**
**ಶೂರೋ ಭಯೇಷ್ವರ್ಥಕೃಚ್ಛ್ರೇಷು ಧೀರಃ**
**ಕೃಚ್ಛ್ರೇಷ್ವಾಪತ್ಸು ಸುಹೃದಶ್ಚಾರಯಶ್ಚ ॥ ೪೯ ॥**

ಉರಿಯುವ ಅಗ್ನಿಯಿಂದ ಬಂಗಾರದ ಶುದ್ಧತನ ಅರಿವಿಗೆ ಬರುತ್ತದೆ. ಸದಾಚಾರದಿಂದ ಸತ್ಪುರುಷನ, ವ್ಯವಹಾರದಿಂದ ಸಜ್ಜನನ, ಭಯದ ಸ್ಥಿತಿ ಬಂದೊದಗಿದಾಗ ಶೂರನ, ಆರ್ಥಿಕ ಸಂಕಟ ಬಂದಾಗ ಧೀರನ ಹಾಗೂ ವಿಪತ್ತು ಬಂದೊದಗಿದಾಗ ಮಿತ್ರ ಹಾಗೂ ಶತ್ರುಗಳ ಪರೀಕ್ಷೆಯಾಗುತ್ತದೆ. ॥ ೪೯ ॥

**ಜರಾ ರೂಪಂ ಹರತಿ ಹಿ ಧೈರ್ಯಮಾಶಾ**
**ಮೃತ್ಯುಃ ಪ್ರಾಣಾನ್ ಧರ್ಮಚರ್ಯಾಮಸೂಯಾ ।**
**ಕ್ರೋಧಃ ಶ್ರಿಯಂ ಶೀಲಮನಾರ್ಯಸೇವಾ**
**ಹ್ರಿಯಂ ಕಾಮಃ ಸರ್ವಮೇವಾಭಿಮಾನಃ ॥ ೫೦ ॥**

ಮುಪ್ಪು ರೂಪವನ್ನು ಅಪಹರಿಸುತ್ತದೆ. ಆಶೆಯು ಧೈರ್ಯವನ್ನೂ, ಮೃತ್ಯುವು ಪ್ರಾಣವನ್ನೂ, ಅಸೂಯೆಯು ಧರ್ಮಾಚರಣೆಯನ್ನೂ, ಕೋಪವು ಸಂಪತ್ತನ್ನೂ, ಅನಾರ್ಯಸೇವೆಯು ಶೀಲವನ್ನೂ, ಕಾಮವು ನಾಚಿಕೆಯನ್ನೂ ಅಪಹರಿಸುತ್ತದೆ. ಅಭಿಮಾನವು ಅರ್ಥಾತ್ ದುರಹಂಕಾರವು ಸರ್ವವಿನಾಶಕವಾಗಿರುತ್ತದೆ. ॥ ೫೦ ॥

**ಶ್ರೀರ್ಮಂಗಲಾತ್ ಪ್ರಭವತಿ ಪ್ರಾಗಲ್ಭ್ಯಾತ್ ಸಂಪ್ರವರ್ಧತೇ ।**
**ದಾಕ್ಷ್ಯಾತ್ತು ಕುರುತೇ ಮೂಲಂ ಸಂಯಮಾತ್ ಪ್ರತಿತಿಷ್ಠತಿ ॥ ೫೧ ॥**

ಶುಭಕಾರ್ಯಗಳಿಂದಾಗಿ ಲಕ್ಷ್ಮಿಯು ಉದಯಿಸುತ್ತಾಳೆ. ಧೈರ್ಯದಿಂದ ಮುನ್ನುಗ್ಗಿ ಕಾರ್ಯ ಮಾಡುತ್ತಿದ್ದರೆ ಅದೇ ಲಕ್ಷ್ಮಿಯು ವೃದ್ಧಿ ಹೊಂದುತ್ತಾಳೆ. ಮಾಡುವ ಕೆಲಸವನ್ನು ಸಾಮರ್ಥ್ಯದಿಂದಲೂ ಕುಶಲತೆಯಿಂದಲೂ ಮಾಡಿದರೆ ಲಕ್ಷ್ಮಿಯು ರೂಢಮೂಲಳಾಗುತ್ತಾಳೆ. ಸಂಯಮದಿಂದ ನಡೆದುಕೊಂಡಲ್ಲಿ ಅವಳು ಸುಪ್ರತಿಷ್ಠಿತಳಾಗುತ್ತಾಳೆ. ॥ ೫೧ ॥

**ಅಷ್ಟೌ ಗುಣಾಃ ಪುರುಷಂ ದೀಪಯಂತಿ**
**ಪ್ರಜ್ಞಾ ಚ ಕೌಲ್ಯಂ ಚ ದಮಃ ಶ್ರುತಂ ಚ ।**
**ಪರಾಕ್ರಮಶ್ಚಾಬಹುಭಾಷಿತಾ ಚ**
**ದಾನಂ ಯಥಾಶಕ್ತಿ ಕೃತಜ್ಞತಾ ಚ ॥ ೫೨ ॥**

ಎಂಟು ಗುಣಗಳು ಮನುಷ್ಯನನ್ನು ಸುಶೋಭಿತನನ್ನಾಗಿ ಮಾಡುತ್ತವೆ. ಅವೆಂದರೆ– ಸುಬುದ್ಧಿ, ಸತ್ಕುಲಪ್ರಸೂತತೆ, ಜಿತೇಂದ್ರಿಯತೆ, ಶಾಸ್ತ್ರಜ್ಞಾನ, ಪರಾಕ್ರಮ, ಮಿತಭಾಷಣ, ಯಥಾಶಕ್ತಿ ದಾನಮಾಡುವುದು ಮತ್ತು ಉಪಕಾರ ಮಾಡಿದವರ ವಿಷಯದಲ್ಲಿ ಕೃತಜ್ಞತೆಯಿಂದಿರುವುದು. ॥ ೫೨ ॥

**ಏತಾನ್ ಗುಣಾಂಸ್ತಾತ ಮಹಾನುಭಾವಾ-**
**ನೇಕೋ ಗುಣಃ ಸಂಶ್ರಯತೇ ಪ್ರಸಹ್ಯ ।**
**ರಾಜಾ ಯದಾ ಸತ್ಕುರುತೇ ಮನುಷ್ಯಂ**
**ಸರ್ವಾನ್ಗುಣಾನೇಷು ಗುಣೋ ವಿಭಾತಿ ॥ ೫೩ ॥**

ಧೃತರಾಷ್ಟ್ರ ! ಈ ಎಲ್ಲ ಮಹಾಗುಣಗಳನ್ನೂ ಸಹ ಒಂದೇ ಒಂದು ಗುಣವು ಆವರಿಸುತ್ತದೆ. ಈ ಎಂಟು ಗುಣಗಳಿಂದಲೂ ಪರಿಪೂರ್ಣನಾದವನನ್ನು ಗೌರವಿಸುವುದರಿಂದ 'ಗುಣಿಯ ಸತ್ಕಾರ' ಎಂಬ ಮಹಾಗುಣವು ಈ ಎಂಟು ಗುಣಗಳನ್ನೂ ಮೀರಿಸಿ ಶೋಭಿಸುತ್ತದೆ. ॥ ೫೩ ॥

**ಅಷ್ಟೌ ನೃಪೇಮಾನಿ ಮನುಷ್ಯಲೋಕೇ**
**ಸ್ವರ್ಗಸ್ಯ ಲೋಕಸ್ಯ ನಿದರ್ಶನಾನಿ ।**
**ಚತ್ವಾರ್ಯೇಷಾಮನ್ವವೇತಾನಿ ಸದ್ಭಿ-**
**ಶ್ಚತ್ವಾರಿ ಚೈಷಾಮನುಯಾಂತಿ ಸಂತಃ ॥ ೫೪ ॥**

ಮಹಾರಾಜ ! ಮನುಷ್ಯಲೋಕದಲ್ಲಿರುವ ಮುಂದೆ ಹೇಳುವ ಎಂಟು ಗುಣಗಳು ಸ್ವರ್ಗಲೋಕದ ಸಂದರ್ಶನ ಮಾಡಿಸಲು ಸಮರ್ಥವಾದವುಗಳಾಗಿವೆ. ಇವುಗಳಲ್ಲಿ ನಾಲ್ಕು ಗುಣಗಳು ಸತ್ಪುರುಷರಲ್ಲಿ ಸಹಜವಾಗಿಯೇ ಇರುತ್ತವೆ. ಉಳಿದ ನಾಲ್ಕುಗುಣಗಳನ್ನು ಅವರು ಅನುಸರಿಸಿ ಹೋಗುತ್ತಾರೆ. ॥ ೫೪ ॥

**ಯಜ್ಞೋ ದಾನಮಧ್ಯಯನಂ ತಪಶ್ಚ**
**ಚತ್ವಾರ್ಯೇತಾನ್ಯನ್ವವೇತಾನಿ ಸದ್ಭಿಃ ।**
**ದಮಃ ಸತ್ಯಮಾರ್ಜವಮಾನೃಶಂಸ್ಯಂ**
**ಚತ್ವಾರ್ಯೇತಾನ್ಯನುಯಾಂತಿ ಸಂತಃ ॥ ೫೫ ॥**

ಯಜ್ಞ, ದಾನ, ಅಧ್ಯಯನ ಮತ್ತು ತಪಸ್ಸು ಈ ನಾಲ್ಕು ಸತ್ಪುರುಷರೊಡನೆ ಸೇರಿಯೇ ಇರುತ್ತವೆ. ಜಿತೇಂದ್ರಿಯತೆ, ಸತ್ಯನಿಷ್ಠೆ ನಿಷ್ಕಾಪಟ್ಯ ಮತ್ತು ದಯೆ – ಈ ನಾಲ್ಕು ಗುಣಗಳನ್ನು ಸತ್ಪುರುಷರು ಅನುಸರಿಸುತ್ತಾರೆ. ॥ ೫೫ ॥

ಇಜ್ಯಾಧ್ಯಯನದಾನಾನಿ ತಪಃ ಸತ್ಯಂ ಕ್ಷಮಾ ಘೃಣಾ ।
ಅಲೋಭ ಇತಿ ಮಾರ್ಗೋऽಯಂ ಧರ್ಮಸ್ಯಾಷ್ಟವಿಧಃ ಸ್ಮೃತಃ ॥ ೫೬ ॥

ಯಜ್ಞ, ಅಧ್ಯಯನ, ದಾನ, ತಪಸ್ಸು, ಸತ್ಯ, ಕ್ಷಮೆ, ದಯೆ ಮತ್ತು ಅಲೋಭ - ಇವು ಧರ್ಮದ ಎಂಟು ಮಾರ್ಗಗಳೆಂದು ಹೇಳಲ್ಪಟ್ಟಿವೆ. ॥ ೫೬ ॥

ತತ್ರ ಪೂರ್ವಚತುರ್ವರ್ಗೋ ದಂಭಾರ್ಥಮಪಿ ಸೇವ್ಯತೇ ।
ಉತ್ತರಶ್ಚ ಚತುರ್ವರ್ಗೋ ನಾಮಹಾತ್ಮಸು ತಿಷ್ಠತಿ ॥ ೫೭ ॥

ಇವುಗಳಲ್ಲಿ ಮೊದಲನೆಯ ನಾಲ್ಕನ್ನು ಅಹಂಕಾರಕ್ಕಾದರೂ ಮಾನವರು ಮಾಡುತ್ತಾರೆ. ಆದರೆ ಕಡೆಯದಾದ ನಾಲ್ಕು ಗುಣಗಳು ಮಹಾತ್ಮರಲ್ಲದವರಲ್ಲಿ ಇರತಕ್ಕವುಗಳಲ್ಲ. ॥ ೫೭ ॥

ನ ಸಾ ಸಭಾ ಯತ್ರ ನ ಸಂತಿ ವೃದ್ಧಾ
ನ ತೇ ವೃದ್ಧಾ ಯೇ ನ ವದಂತಿ ಧರ್ಮಮ್ ।
ನಾಸೌ ಧರ್ಮೋ ಯತ್ರ ನ ಸತ್ಯಮಸ್ತಿ
ನ ತತ್ ಸತ್ಯಂ ಯಚ್ಛಲೇನಾಭ್ಯುಪೇತಮ್ ॥ ೫೮ ॥

ಯಾವ ಸಭೆಯಲ್ಲಿ ವೃದ್ಧರಾದವರಿರುವುದಿಲ್ಲವೋ ಅದು ಸಭೆಯೇ ಅಲ್ಲ. ಧರ್ಮವನ್ನು ಪ್ರತಿಪಾದಿಸದವರು ವೃದ್ಧರೇ ಅಲ್ಲ. ಸತ್ಯಾಂಶವನ್ನು ಬಿಟ್ಟು ಧರ್ಮವನ್ನು ಹೇಳಹೋದರೆ ಅದು ಧರ್ಮವೆನಿಸುವುದಿಲ್ಲ. ವಂಚನೆಯಿಂದ ಕೂಡಿದ, ಕೇವಲ ತೋರಿಕೆಯ ಸತ್ಯವು ಸತ್ಯವೆನಿಸಿಕೊಳ್ಳುವುದಿಲ್ಲ. ॥ ೫೮ ॥

ಸತ್ಯಂ ರೂಪಂ ಶ್ರುತಂ ವಿದ್ಯಾ ಕೌಲ್ಯಂ ಶೀಲಂ ಬಲಂ ಧನಮ್ ।
ಶೌರ್ಯಂ ಚ ಚಿತ್ರಭಾಷ್ಯಂ ಚ ದಶೇಮೇ ಸ್ವರ್ಗಯೋನಯಃ ॥ ೫೯ ॥

ಸತ್ಯ, ವಿನಯಸ್ವಭಾವ (ರೂಪ), ಶಾಸ್ತ್ರಜ್ಞಾನ, ವಿದ್ಯೆ, ಕುಲೀನತೆ, ಶೀಲ, ಬಲ, ಧನ, ಶೌರ್ಯ ಮತ್ತು ಚಮತ್ಕಾರಪೂರ್ಣ ಮಾತು - ಈ ಹತ್ತು ಸ್ವರ್ಗಪ್ರಾಪ್ತಿಗೆ ಕಾರಣವಾಗುತ್ತವೆ. ॥ ೫೯ ॥

ಪಾಪಂ ಕುರ್ವನ್ ಪಾಪಕೀರ್ತಿಃ ಪಾಪಮೇವಾಶ್ನುತೇ ಫಲಮ್ ।
ಪುಣ್ಯಂ ಕುರ್ವನ್ ಪುಣ್ಯಕೀರ್ತಿಃ ಪುಣ್ಯಮತ್ಯಂತಮಶ್ನುತೇ ॥ ೬೦ ॥

ಪಾಪಿಷ್ಠನೆಂದು ಹೆಸರುಗಳಿಸಿದವನು ಪಾಪಕರ್ಮಗಳನ್ನೇ ಮಾಡುತ್ತಲಿದ್ದು ಪಾಪದ ಫಲವನ್ನೇ ಅನುಭವಿಸುತ್ತಾನೆ. ಪುಣ್ಯಾತ್ಮನು ಪುಣ್ಯಕಾರ್ಯಗಳನ್ನೇ ಮಾಡುತ್ತಾ ಪುಣ್ಯಫಲಗಳನ್ನೇ ಉಪಭೋಗಿಸುತ್ತಾನೆ. ॥ ೬೦ ॥

**ತಸ್ಮಾತ್ ಪಾಪಂ ನ ಕುರ್ವೀತ ಪುರುಷಃ ಶಂಸಿತವ್ರತಃ ।**
**ಪಾಪಂ ಪ್ರಜ್ಞಾಂ ನಾಶಯತಿ ಕ್ರಿಯಮಾಣಂ ಪುನಃ ಪುನಃ ॥ ೬೧**

ಆದುದರಿಂದ ಪ್ರಶಂಸಿತವಾದ ವ್ರತಾನುಷ್ಠಾನವುಳ್ಳವನು ಪಾಪಕಾರ್ಯಗ ಮಾಡಲೇಬಾರದು. ಪುನಃ ಪುನಃ ಮಾಡುವ ಪಾಪಕ್ರಿಯೆಯು ಮನುಷ್ಯನ ಪ್ರಜ್ಞೆಂ ವಿನಾಶಗೊಳಿಸುತ್ತದೆ. ॥ ೬೧ ॥

**ನಷ್ಟಪ್ರಜ್ಞಃ ಪಾಪಮೇವ ನಿತ್ಯಮಾರಭತೇ ನರಃ ।**
**ಪುಣ್ಯಂ ಪ್ರಜ್ಞಾಂ ವರ್ಧಯತಿ ಕ್ರಿಯಮಾಣಂ ಪುನಃ ಪುನಃ ॥ ೬೨**

ಪ್ರಜ್ಞೆಯನ್ನು ಕಳೆದುಕೊಂಡವನು ಪುನಃ ಪುನಃ ಪಾಪಕಾರ್ಯ ಮಾಡುತ್ತಿರುತ್ತಾನೆ. ಅಂತೆಯೇ ಪುನಃ ಪುನಃ ಮಾಡುವ ಪುಣ್ಯಕಾರ್ಯದಿಂದ ಪ್ರಜ್ಞೆ ವರ್ಧಿಸುತ್ತದೆ. ॥ ೬೨ ॥

**ವೃದ್ಧಪ್ರಜ್ಞಃ ಪುಣ್ಯಮೇವ ನಿತ್ಯಮಾರಭತೇ ನರಃ ।**
**ಪುಣ್ಯಂ ಕುರ್ವನ್ ಪುಣ್ಯಕೀರ್ತಿಃ ಪುಣ್ಯಂ ಸ್ಥಾನಂ ಸ್ಮ ಗಚ್ಛತಿ ।**
**ತಸ್ಮಾತ್ ಪುಣ್ಯಂ ನಿಷೇವೇತ ಪುರುಷಃ ಸುಸಮಾಹಿತಃ ॥ ೬೩**

ಸುಸಂಸ್ಕೃತವಾದ ಬುದ್ಧಿಯುಳ್ಳವನು ಪ್ರತಿನಿತ್ಯವೂ ಪುಣ್ಯಕರ್ಮಗ ಮಾಡುತ್ತಿರುತ್ತಾನೆ. ಈ ರೀತಿಯಾಗಿ ಪುಣ್ಯಕಾರ್ಯ ಮಾಡಿ ಪುಣ್ಯಪುರುಷನೆಂದು ಕೀರ್ತಿಯ ಪಡೆದ ಮನುಷ್ಯನು ಮರಣದ ನಂತರ ಪುಣ್ಯಲೋಕಗಳನ್ನೇ ಪಡೆಯುತ್ತಾನೆ. ಆದುದ ಮನುಷ್ಯನು ಏಕಾಗ್ರಚಿತ್ತತೆಯಿಂದ ಪುಣ್ಯವನ್ನೇ ಸೇವಿಸಬೇಕು. ॥ ೬೩ ॥

**ಅಸೂಯಕೋ ದಂದಶೂಕೋ ನಿಷ್ಠುರೋ ವೈರಕೃಚ್ಛಠಃ ।**
**ಸ ಕೃಚ್ಛ್ರಂ ಮಹದಾಪ್ನೋತಿ ನ ಚಿರಾತ್ ಪಾಪಮಾಚರನ್ ॥ ೬೪**

ಗುಣದಲ್ಲಿ ದೋಷವನ್ನು ಹುಡುಕುವವನು, ಮರ್ಮಸ್ಥಳಕ್ಕೆ ಗುರಿಯಿ ಹೊಡೆವವನು, ದಯಾರಹಿತನು ಅಥವಾ ನಿಷ್ಠುರೋಕ್ತಿಗಳನ್ನಾಡುವವನು, ಸಣ್ಣ ವಿಷಯಗಳಿಗಾಗಿ ಶತ್ರುತ್ವವನ್ನು ಸಾಧಿಸುವವನು – ಇಂತಹವನು ಪಾಪಕಾರ್ಯವ ಸರ್ವದಾ ಮಾಡುತ್ತಿದ್ದು ಕಾಲಾನುಕ್ರಮದಲ್ಲಿ ಮಹಾಕಷ್ಟಕ್ಕೆ ಗುರಿಯಾಗುತ್ತಾನೆ. ॥ ೬೪

**ಅನಸೂಯಃ ಕೃತಪ್ರಜ್ಞಃ ಶೋಭನಾನ್ಯಾಚರನ್ ಸದಾ ।**
**ನ ಕೃಚ್ಛ್ರಂ ಮಹದಾಪ್ನೋತಿ ಸರ್ವತ್ರ ಚ ವಿರೋಚತೇ ॥ ೬೫**

ಯಾರ ವಿಷಯದಲ್ಲಿಯೂ ಅಸೂಯೆಪಡದವನು, ಪರಿಶುದ್ಧವಾ ಪ್ರಜ್ಞೆಯುಳ್ಳವನು, ಸದಾ ಕಾಲದಲ್ಲಿಯೂ ಪುಣ್ಯಕರ್ಮವನ್ನೇ ಆಚರಿಸುತ್ತಿ ಮಹತ್ತರವಾದ ಕಷ್ಟಗಳಿಗೆ ಗುರಿಯಾಗದೆ ಸರ್ವತ್ರ ಸಮ್ಮಾನಿತನಾಗುತ್ತಾನೆ. ॥ ೬೫ ॥

**ಪ್ರಜ್ಞಾಮೇವಾಗಮಯತಿ ಯಃ ಪ್ರಾಜ್ಞೇಭ್ಯಃ ಸ ಪಂಡಿತಃ।**
**ಪ್ರಾಜ್ಞೋ ಹ್ಯವಾಪ್ಯ ಧರ್ಮಾರ್ಥೌ ಶಕ್ನೋತಿ ಸುಖಮೇಧಿತುಮ್ ॥ ೬೬ ॥**

ಪ್ರಾಜ್ಞರಾದವರಿಂದ ಯಾವನು ತಿಳುವಳಿಕೆಯನ್ನು ಪಡೆದುಕೊಳ್ಳುವನೋ ಅವನು ಪಂಡಿತನೆನಿಸಿಕೊಳ್ಳುವನು. ಏಕೆಂದರೆ ಪ್ರಾಜ್ಞನಾದವನು ಮಾತ್ರವೇ ಧರ್ಮಾರ್ಥಗಳನ್ನು ಪಡೆದು ಧರ್ಮಾರ್ಥಗಳ ಮೂಲಕ ಅನಾಯಾಸವಾಗಿ ತನ್ನ ಸುಖವನ್ನು ಮತ್ತು ಉನ್ನತಿಯನ್ನು ಸಾಧಿಸಿಕೊಳ್ಳಬಲ್ಲನು. ॥ ೬೬ ॥

**ದಿವಸೇನೈವ ತತ್ ಕುರ್ಯಾದ್ ಯೇನ ರಾತ್ರೌ ಸುಖಂ ವಸೇತ್।**
**ಅಷ್ಟಮಾಸೇನ ತತ್ ಕುರ್ಯಾದ್ ಯೇನ ವರ್ಷಾಃ ಸುಖಂ ವಸೇತ್ ॥ ೬೭ ॥**

ಯಾವ ಕೆಲಸವನ್ನು ಹಗಲಿನಲ್ಲಿ ಮಾಡುವುದರಿಂದ ರಾತ್ರಿಯನ್ನು ಸುಖವಾಗಿ ಕಳೆಯಬಹುದೋ ಆ ಕೆಲಸವನ್ನೇ ದಿನವೆಲ್ಲ ಮಾಡಬೇಕು. ಯಾವ ಕೆಲಸವನ್ನು ಎಂಟು ತಿಂಗಳು ಮಾಡಿದರೆ ಮಳೆಗಾಲದಲ್ಲಿ ಉಳಿದ ನಾಲ್ಕು ತಿಂಗಳುಗಳನ್ನು ಸುಖವಾಗಿ ಕಳೆಯಬಲ್ಲನೋ ಆ ಕಾರ್ಯವನ್ನು ಎಂಟು ತಿಂಗಳುಗಳಲ್ಲಿಯೇ ಮಾಡಿ ಮುಗಿಸಬೇಕು. ॥ ೬೭ ॥

**ಪೂರ್ವೇ ವಯಸಿ ತತ್ ಕುರ್ಯಾದ್ ಯೇನ ವೃದ್ಧಃ ಸುಖಂ ವಸೇತ್ ।**
**ಯಾವಜ್ಜೀವೇನ ತತ್ ಕುರ್ಯಾದ್ ಯೇನ ಪ್ರೇತ್ಯ ಸುಖಂ ವಸೇತ್ ॥ ೬೮ ॥**

ಯಾವ ಕಾರ್ಯವನ್ನು ಮಾಡುವುದರಿಂದ ವೃದ್ಧಾಪ್ಯದಲ್ಲಿ ಸುಖವಾಗಿರಲು ಸಾಧ್ಯವಾಗುವುದೋ ಅಂತಹ ಕಾರ್ಯಗಳನ್ನು ಪೂರ್ವವಯಸ್ಸಿನಲ್ಲಿ ಮಾಡಬೇಕು. ಅವಸಾನಾನಂತರದಲ್ಲಿ ಸದ್ಗತಿಯನ್ನು ಪಡೆಯಲು ಯಾವ ಸತ್ಕಾರ್ಯಗಳನ್ನು ಮಾಡಬೇಕೋ ಅದನ್ನು ಜೀವಮಾನಪೂರ್ತಿ ಮಾಡಬೇಕು. ॥ ೬೮ ॥

**ಜೀರ್ಣಮನ್ನಂ ಪ್ರಶಂಸಂತಿ ಭಾರ್ಯಾಂ ಚ ಗತಯೌವನಾಮ್ ।**
**ಶೂರಂ ವಿಜಿತಸಂಗ್ರಾಮಂ ಗತಪಾರಂ ತಪಸ್ವಿನಮ್ ॥ ೬೯ ॥**

ಸಜ್ಜನರು ಜೀರ್ಣವಾದ ನಂತರ ಅನ್ನವನ್ನೂ, ನಿಷ್ಕಳಂಕವಾಗಿ ಸಂಸಾರ ನಡೆಸಿ ಗತಯೌವನಳಾದ ಪತ್ನಿಯನ್ನೂ,ಯುದ್ಧದಲ್ಲಿ ಜಯಿಸಿ ಬಂದ ಯೋಧನನ್ನೂ, ಹಾಗೂ ಸಂಸಾರಸಾಗರವನ್ನು ದಾಟಿದ ತಪಸ್ವಿಯನ್ನೂ ಪ್ರಶಂಸಿಸುತ್ತಾರೆ. ॥ ೬೯ ॥

**ಧನೇನಾಧರ್ಮಲಬ್ಧೇನ ಯಚ್ಛಿದ್ರಮಪಿಧೀಯತೇ।**
**ಅಸಂವೃತಂ ತದ್ ಭವತಿ ತತೋಽನ್ಯದವದೀರ್ಯತೇ ॥ ೭೦ ॥**

ಅಧರ್ಮಮೂಲದಿಂದ ಪಡೆದ ಹಣದಿಂದ ಯಾವುದಾದರೂ ದೋಷವ ಮುಚ್ಚಿಕೊಳ್ಳಲು ಪ್ರಯತ್ನಿಸಿದರೆ, ಅದೂ ಕೂಡಾ ಸಾಧ್ಯವಾಗುವುದಿಲ್ಲ ಅದರೊಂದಿಗೆ ಇತರ ಹೊಸದೋಷಗಳೂ ಪ್ರಕಟಗೊಳ್ಳುತ್ತವೆ. ॥ ೭೦ ॥

**ಗುರುರಾತ್ಮವತಾಂ ಶಾಸ್ತಾ ಶಾಸ್ತಾ ರಾಜಾ ದುರಾತ್ಮನಾಮ್ ।**
**ಅಥ ಪ್ರಚ್ಛನ್ನಪಾಪಾನಾಂ ಶಾಸ್ತಾ ವೈವಸ್ವತೋ ಯಮಃ ॥ ೭೧ ॥**

ಜಿತೇಂದ್ರಿಯರಾದವರಿಗೆ ಸದ್ಗುರುವು ಶಾಸಕನಾಗುತ್ತಾನೆ. ಜಿತೇಂದ್ರಿಯರಲ್ಲ ದುರಾತ್ಮರಿಗೆ ರಾಜನು ಶಾಸಕನಾಗುತ್ತಾನೆ. ಯಾರಿಗೂ ತಿಳಿಯದಂತೆ ಪಾ ಮಾಡುವವರಿಗೆ ಹಾಗೂ ತಾನು ಮಾಡಿದ ಪಾಪವನ್ನು ಮುಚ್ಚಿಟ್ಟುಕೊಳ್ಳುವವರಿ ಸೂರ್ಯನ ಮಗನಾದ ಯಮನೇ ಶಾಸಕನಾಗುತ್ತಾನೆ. ॥ ೭೧ ॥

**ಋಷೀಣಾಂ ಚ ನದೀನಾಂ ಚ ಕುಲಾನಾಂ ಚ ಮಹಾತ್ಮನಾಮ್ ।**
**ಪ್ರಭವೋ ನಾಧಿಗಂತವ್ಯಃ ಸ್ತ್ರೀಣಾಂ ದುಶ್ಚರಿತಸ್ಯ ಚ ॥ ೭೨ ॥**

ಋಷಿಗಳ ಮೂಲ, ನದಿಗಳ ಮೂಲ, ಮಹಾತ್ಮರ ಕುಲಗಳ ಮೂಲ, ಅಂತೆಯೆ ಸ್ತ್ರೀಯರ ದುಶ್ಚರಿತದ ಮೂಲ - ಇವುಗಳಲ್ಲಿ ಯಾವುದನ್ನೂ ತಿಳಿಯಲ ಹೋಗಬಾರದು. ॥ ೭೨ ॥

**ದ್ವಿಜಾತಿಪೂಜಾಭಿರತೋ ದಾತಾ ಜ್ಞಾತಿಷು ಚಾರ್ಜವೀ ।**
**ಕ್ಷತ್ರಿಯಃ ಶೀಲಭಾಗ್ ರಾಜಂಶ್ಚಿರಂ ಪಾಲಯತೇ ಮಹೀಮ್ ॥ ೭೩ ॥**

ಬ್ರಾಹ್ಮಣರ ಪೂಜೆ ಮತ್ತು ಪರಿಚರ್ಯೆಗಳಲ್ಲಿ ನಿರತನಾಗಿರುವವನೂ ದಾನಶೀಲನೂ, ತನ್ನ ಜ್ಞಾತಿ - ಬಾಂಧವರಲ್ಲಿ ಸೌಜನ್ಯದಿಂದಿರತಕ್ಕವನೂ ಮತ ಶೀಲವಂತನಾಗಿರುವವನೂ ಆದ ಕ್ಷತ್ರಿಯನು ಬಹುಕಾಲ ರಾಜ್ಯಪಾಲನೆ ಮಾಡಲು ಸಮರ್ಥನಾಗುತ್ತಾನೆ. ॥ ೭೩ ॥

**ಸುವರ್ಣಪುಷ್ಪಾಂ ಪೃಥಿವೀಂ ಚಿನ್ವಂತಿ ಪುರುಷಾಸ್ತ್ರಯಃ ।**
**ಶೂರಶ್ಚ ಕೃತವಿದ್ಯಶ್ಚ ಯಶ್ಚ ಜಾನಾತಿ ಸೇವಿತುಮ್ ॥ ೭೪ ॥**

ಶೂರನಾದವನು, ಪೂರ್ಣವಿದ್ಯಾವಂತನಾಗಿರುವವನು ಮತ್ತು ಸೇವಾಧರ್ಮವನ್ನ ಚೆನ್ನಾಗಿ ತಿಳಿದಿರುವವನು - ಈ ಮೂವರು ಮಾತ್ರವೇ ಪೃಥ್ವೀರೂಪದ ಲತೆಯಲ್ಲಿರುವ ಸುವರ್ಣಮಯವಾದ ಪುಷ್ಪಗಳನ್ನು ಹೊಂದಲು ಸಮರ್ಥರು. (ಭೂಮಿಯಲ್ಲಿ ಚಿನ್ನವನ್ನು ಬೆಳೆಯಬಲ್ಲರು.) ॥ ೭೪ ॥

**ಬುದ್ಧಿಶ್ರೇಷ್ಠಾನಿ ಕರ್ಮಾಣಿ ಬಾಹುಮಧ್ಯಾನಿ ಭಾರತ ।**
**ತಾನಿ ಜಂಘಾಜಘನ್ಯಾನಿ ಭಾರಪ್ರತ್ಯವರಾಣಿ ಚ ॥ ೭೫ ॥**

ಭಾರತ, ಬುದ್ಧಿಯಿಂದ ವಿಚಾರಮಾಡಿ ಮಾಡುವ ಕೆಲಸ ಶ್ರೇಷ್ಠವಾದದ್ದು ಬಾಹುಬಲದಿಂದ ಮಾಡುವ ಕೆಲಸ ಮಧ್ಯಮ ಶ್ರೇಣಿಯದು, ಮೊಣಕಾಲಿನ ಶಕ್ತಿಯಿಂದ ಮಾಡಲ್ಪಡುವ ಕಾರ್ಯವು ಅಧಮವಾದದ್ದು ಹಾಗೂ ಭಾರವನ್ನು ಹೊತ್ತು ಮಾಡುವ ಕಾರ್ಯವು ಅದಕ್ಕಿಂತ ಅಧಮವಾದದ್ದು. ॥ ೭೫ ॥

**ದುರ್ಯೋಧನೇಽಥ ಶಕುನೌ ಮೂಢೇ ದುಃಶಾಸನೇ ತಥಾ ।**
**ಕರ್ಣೇ ಚೈಶ್ವರ್ಯಮಾಧಾಯ ಕಥಂ ತ್ವಂ ಭೂತಿಮಿಚ್ಛಸಿ ॥ ೭೬ ॥**

ದುರ್ಯೋಧನ, ಶಕುನಿ, ಮೂಢನಾದ ದುಃಶಾಸನ ಹಾಗೂ ಕರ್ಣರಿಗೆ ನೀನು ರಾಜ್ಯಭಾರವನ್ನು ವಹಿಸಿಕೊಟ್ಟು ಹೇಗೆ ತಾನೆ ಔನ್ನತ್ಯವನ್ನು ಬಯಸುವೆ ? ॥ ೭೬ ॥

**ಸರ್ವೈರ್ಗುಣೈರುಪೇತಾಸ್ತು ಪಾಂಡವಾ ಭರತರ್ಷಭ ।**
**ಪಿತೃವತ್ ತ್ವಯಿ ವರ್ತಂತೇ ತೇಷು ವರ್ತಸ್ವ ಪುತ್ರವತ್ ॥ ೭೭ ॥**

ಭರತರ್ಷಭ ! ಪಾಂಡವರು ಸರ್ವಗುಣಸಂಪನ್ನರು. ನಿನ್ನನ್ನು ಅವರು ಸಾಕ್ಷಾತ್ ತಂದೆಯಂತೆಯೇ ಗೌರವಿಸುತ್ತಾರೆ. ಅಂತಹವರಲ್ಲಿ ನೀನೂ ಸಹ ಪುತ್ರಭಾವವನ್ನಿಡು. ಸೌಜನ್ಯದಿಂದ ವರ್ತಿಸು. ॥ ೭೭ ॥

ಇತಿ ಶ್ರೀಮಹಾಭಾರತೇ ಉದ್ಯೋಗಪರ್ವಣಿ ಪ್ರಜಾಗರಪರ್ವಣಿ
ವಿದುರನೀತಿವಾಕ್ಯೇ ಪಂಚತ್ರಿಂಶೋಽಧ್ಯಾಯಃ ॥ ೩೫ ॥



# ನಾಲ್ಕನೇ ಅಧ್ಯಾಯ

ವಿದುರ ಉವಾಚ

**ಅತ್ರೈವೋದಾಹರಂತೀಮಮಿತಿಹಾಸಂ ಪುರಾತನಮ್ ।**
**ಆತ್ರೇಯಸ್ಯ ಚ ಸಂವಾದಂ ಸಾಧ್ಯಾನಾಂ ಚೇತಿ ನಃ ಶ್ರುತಮ್ ॥ ೧ ॥**

ವಿದುರನು ಹೇಳಿದನು - ಈ ವಿಷಯದಲ್ಲಿ ಬಹುಪುರಾತನವಾದ ದತ್ತಾತ್ರೇಯ ಸಾಧ್ಯರ ಸಂವಾದರೂಪವಾದ ಇತಿಹಾಸವನ್ನು ಉದಾಹರಣೆಯಾಗಿ ಹೇಳುವುದ ನಾವು ಕೇಳಿದ್ದೇವೆ. ॥ ೧ ॥

**ಚರಂತಂ ಹಂಸರೂಪೇಣ ಮಹರ್ಷಿಂ ಸಂಶಿತವ್ರತಮ್ ।**
**ಸಾಧ್ಯಾ ದೇವಾ ಮಹಾಪ್ರಾಜ್ಞಂ ಪರ್ಯಪೃಚ್ಛಂತ ವೈ ಪುರಾ ॥ ೨ ॥**

ಹಿಂದೆ ಸಂನ್ಯಾಸಿಯ ರೂಪವನ್ನು ಧರಿಸಿ (ಪರಮಹಂಸ ದೀಕ್ಷೆಯನ್ನು ಹೊಂದಿ ದೇಶಾಟನೆ ಮಾಡುತ್ತಿದ್ದ ಕಠಿಣವ್ರತನಿಷ್ಠನಾದ, ಮಹಾಪ್ರಾಜ್ಞನಾದ ದತ್ತಾತ್ರೇಯನ ಸಂಧಿಸಿ ಸಾಧ್ಯರು ಹೀಗೆಂದು ಪ್ರಶ್ನಿಸಿದರು. ॥ ೨ ॥

ಸಾಧ್ಯಾ ಊಚುಃ

**ಸಾಧ್ಯಾ ದೇವಾ ವಯಮೇತೇ ಮಹರ್ಷೇ**
**ದೃಷ್ಟ್ವಾ ಭವಂತಂ ನ ಶಕ್ನುಮೋಽನುಮಾತುಮ್ ।**
**ಶ್ರುತೇನ ಧೀರೋ ಬುದ್ಧಿಮಾಂಸ್ತ್ವಂ ಮತೋ ನಃ**
**ಕಾವ್ಯಾಂ ವಾಚಂ ವಕ್ತುಮರ್ಹಸ್ಯುದಾರಾಮ್ ॥ ೩ ॥**

ಸಾಧ್ಯರು ಹೇಳಿದರು - ಮಹರ್ಷಿಯೇ, ನಾವು ಸಾಧ್ಯದೇವತೆಗಳು. ನಿನ್ನನ್ನು ನೋ ನೀನಾರೆಂದು ತಿಳಿಯಲು ಅಸಮರ್ಥರಾಗಿದ್ದೇವೆ. ನೀನು ಶಾಸ್ತ್ರಾರ್ಥಗಳನ್ನು ತಿ ಆತ್ಮದರ್ಶನ ಮಾಡಿರುವ ಧೀರನೆಂದೂ ಮಹಾಬುದ್ಧಿವಂತನೆಂದೂ ನ ಅಭಿಪ್ರಾಯವಾಗಿದೆ. ಆದುದರಿಂದ ನೀನು ವಿದ್ವತ್ಪೂರ್ಣವಾದ ಸುಮನೋಹರವಾ ಸುಲಲಿತವಾದ ಮಾತುಗಳಿಂದ ನಮಗೆ ಉಪದೇಶಿಸೆಂದು ಪ್ರಾರ್ಥಿಸುತ್ತೇವೆ. ॥ ೩ ॥

ಹಂಸ ಉವಾಚ

**ಏತತ್ ಕಾರ್ಯಮಮರಾಃ ಸಂಶ್ರುತಂ ಮೇ**
**ಧೃತಿಃ ಶಮಃ ಸತ್ಯಧರ್ಮಾನುವೃತ್ತಿಃ ।**

ಪರಮಹಂಸನು ಹೇಳಿದನು - ದೇವತೆಗಳೆ! ಧೈರ್ಯಧಾರಣೆ, ಮನೋನಿಗ್ರಹ ಹಾಗೂ ಅವಿಚ್ಛಿನ್ನವಾದ ಸತ್ಯಧರ್ಮಪಾಲನೆ ಇವು ಮುಖ್ಯ ಕರ್ತವ್ಯಗಳೆಂದು ನಾನು ತಿಳಿದಿದ್ದೇನೆ. ಇದರ ಮೂಲಕ ಪುರುಷನು ಅಜ್ಞಾನವನ್ನು ಹೊರ ಹಾಕಿ ಪ್ರಿಯವಾದುದನ್ನೂ ಅಪ್ರಿಯವಾದುದನ್ನೂ - ಎರಡನ್ನೂ ಆತ್ಮಸಮಾನವಾಗಿ ಕಾಣಬೇಕು. ॥ ೪ ॥

**ಆಕ್ರುಶ್ಯಮಾನೋ ನಾಕ್ರೋಶೇನ್ಮನ್ಯುರೇವ ತಿತಿಕ್ಷತಃ।**
**ಆಕ್ರೋಷ್ಟಾರಂ ನಿರ್ದಹತಿ ಸುಕೃತಂ ಚಾಸ್ಯ ವಿಂದತಿ ॥ ೫ ॥**

ಇತರರಿಂದ ನಿಂದಿಸಲ್ಪಟ್ಟರೂ ಸಹ ಕೋಪಗೊಳ್ಳಬಾರದು. ಸಹನಶೀಲನಾಗಿರಬೇಕು. ಕ್ಷಮಿಸುವವನಲ್ಲಿ ಹಿಡಿದಿಟ್ಟ ಕೋಪವು ಸುಪ್ತವಾಗಿಯೇ ಇದ್ದು ನಿಂದಿಸುವವನನ್ನು ದಹಿಸುತ್ತದೆ. ನಿಂದಿಸುವವನಲ್ಲಿ ಇರಬಹುದಾದ ಯತ್ಕಿಂಚಿತ್ ಸುಕೃತವನ್ನೂ ಸಹ ಅದು ಅಪಹರಿಸಿಬಿಡುತ್ತದೆ. ॥ ೫ ॥

**ನಾಕ್ರೋಶೀ ಸ್ಯಾನ್ನಾವಮಾನೀ ಪರಸ್ಯ**
**ಮಿತ್ರದ್ರೋಹೀ ನೋತ ನೀಚೋಪಸೇವೀ ।**
**ನ ಚಾಭಿಮಾನೀ ನ ಚ ಹೀನವೃತ್ತೋ**
**ರೂಕ್ಷಾಂ ವಾಚಂ ರುಷತೀಂ ವರ್ಜಯೀತ ॥ ೬ ॥**

ಇತರರನ್ನು ನಿಂದಿಸಬಾರದು, ಅವಮಾನಿಸಲೂ ಬಾರದು, ಮಿತ್ರರಿಗೆ ದ್ರೋಹವನ್ನೆಸಗಬಾರದು. ನೀಚಪುರುಷರ ಸೇವೆ ಮಾಡಬಾರದು, ದುರಹಂಕಾರಿಯಾಗಬಾರದು. ದುರಾಚಾರಿಯಾಗಬಾರದು. ರೋಷಯುಕ್ತವಾದ ಕಠಿಣೋಕ್ತಿಯನ್ನು ಪರಿತ್ಯಜಿಸಬೇಕು. ॥ ೬ ॥

**ಮರ್ಮಾಣ್ಯಸ್ಥೀನಿ ಹೃದಯಂ ತಥಾಸೂನ್**
**ರೂಕ್ಷಾ ವಾಚೋ ನಿರ್ದಹಂತೀಹ ಪುಂಸಾಮ್ ।**
**ತಸ್ಮಾದ್ ವಾಚಮುಷತೀಂ ರೂಕ್ಷರೂಪಾಂ**
**ಧರ್ಮಾರಾಮೋ ನಿತ್ಯಶೋ ವರ್ಜಯೀತ ॥ ೭ ॥**

ಕಠಿಣೋಕ್ತಿಗಳು ಮನುಷ್ಯರ ಮರ್ಮಸ್ಥಾನ, ಮೂಳೆ ಮತ್ತು ಹೃದಯವನ್ನು ಭೇದಿಸುತ್ತವೆ ಹಾಗೂ ಪ್ರಾಣಗಳನ್ನು ದಹಿಸಿಬಿಡುತ್ತವೆ. ಹಾಗಾಗಿ ಸದಾ ಯಶಸ್ಸನ್ನು ಬಯಸುವ ಧರ್ಮನಿಷ್ಠನು ಹೃದಯಭೇದಿಯಾದ ಕಠಿಣೋಕ್ತಿಗಳನ್ನು ಪೂರ್ಣವಾಗಿ ವರ್ಜಿಸಬೇಕು. ॥ ೭ ॥

ಅರುಂತುದಂ ಪರುಷಂ ರೂಕ್ಷವಾಚಂ
ವಾಕ್ಕಂಟಕೈರ್ವಿತುದಂತಂ ಮನುಷ್ಯಾನ್ ।
ವಿದ್ಯಾದಲಕ್ಷ್ಮೀಕತಮಂ ಜನಾನಾಂ
ಮುಖೇ ನಿಬದ್ಧಾಂ ನಿರ್ಋತಿಂ ವೈ ವಹಂತಮ್ ॥ ೮ ॥

ಮನಸ್ಸನ್ನು ನೋಯಿಸುವ ಕಠಿಣವಾದ ಒರಟೊರಟಾದ ಮುಳ್ಳುಗಳಂತಿರ ಮಾತುಗಳಿಂದ ಮನುಷ್ಯರನ್ನು ಹಿಂಸಿಸುವ, ಮುಖದಲ್ಲಿ ಯಾವಾಗ ಮೃತ್ಯುವನ್ನೇ ಧರಿಸಿರುವ ಮನುಷ್ಯನನ್ನು ಮಾನವಜಾತಿಯಲ್ಲಿಯೇ ದಟ್ಟದರಿದ್ರನೆಂ ತಿಳಿಯಬೇಕು. ॥ ೮ ॥

ಪರಶ್ಚೇದೇನಮಭಿವಿಧ್ಯೇತ ವಾಣೈ-
ರ್ಭೃಶಂ ಸುತೀಕ್ಷ್ಣೈರನಲಾರ್ಕದೀಪ್ತೈಃ ।
ಸ ವಿಧ್ಯಮಾನೋಽಪ್ಯತಿದಹ್ಯಮಾನೋ
ವಿದ್ಯಾತ್ ಕವಿಃ ಸುಕೃತಂ ಮೇ ದಧಾತಿ ॥ ೯ ॥

ಎದುರಾಳಿಯು ಸುತೀಕ್ಷ್ಣವಾದ ಅಗ್ನಿಸೂರ್ಯರ ಮಹಾಜ್ವಾಲೆಗಳಿಗೆ ಸಮಾನವಾ ವಾಗ್ಬಾಣಗಳಿಂದ ಪ್ರಹರಿಸಿದರೂ ಮತ್ತು ಆ ಬಾಣಗಳಿಂದ ತಾನು ದಹಿಸಲ್ಪಟ್ಟರೂ ಸ ಎದುರಾಳಿಯು ತನ್ನ ಸುಕೃತವನ್ನೇ ಹೆಚ್ಚಿಸುತ್ತಿರುವನೆಂದು ಭಾವಿಸಿ ಜ್ಞಾನಿಯಾದವನು ವಾಗ್ಬಾಣಗಳನ್ನು ಸಹನೆಯಿಂದ ತಡೆದುಕೊಳ್ಳಬೇಕು. ॥ ೯ ॥

ಯದಿ ಸಂತಂ ಸೇವತಿ ಯದ್ಯಸಂತಂ
ತಪಸ್ವಿನಂ ಯದಿ ವಾ ಸ್ತೇನಮೇವ ।
ವಾಸೋ ಯಥಾ ರಂಗವಶಂ ಪ್ರಯಾತಿ
ತಥಾ ಸ ತೇಷಾಂ ವಶಮಭ್ಯುಪೈತಿ ॥ ೧೦ ॥

ದಾರಕ್ಕೆ ಯಾವ ಬಣ್ಣ ಹಾಕಲಾಗುವುದೋ, ಬಟ್ಟೆಯೂ ಅದೇ ಬಣ್ಣದ್ದಾಗಿರುತ್ತ ಅದರಂತೆಯೇ ಸತ್ಪುರುಷ, ದುರ್ಜನ, ತಪಸ್ವಿ, ಕಳ್ಳ – ಇವರಲ್ಲಿ ಯಾರನ್ನು ಯಾ ಸೇವಿಸುತ್ತಾರೋ ಅವರು ಅವರಂತೆಯೇ ಆಗುತ್ತಾರೆ, ಅಂದರೆ ಅವ ಪ್ರಭಾವಕ್ಕೆ ಒಳಗಾಗುತ್ತಾರೆ. ॥ ೧೦ ॥

ಅತಿವಾದಂ ನ ಪ್ರವದೇನ್ನ ವಾದಯೇದ್
ಯೋಽನಾಹತಃ ಪ್ರತಿಹನ್ಯಾನ್ನ ಘಾತಯೇತ್ ।

ಮತ್ತೊಬ್ಬರು ತನ್ನನ್ನು ನಿಂದಿಸಿ ಅವಮಾನಿಸುತ್ತಿದ್ದರೂ ಯಾರು ನಿಂದಿಸುವವನನ್ನು ಅವಮಾನಿಸುವುದಿಲ್ಲವೋ ಹಾಗೂ ಆತ ಪ್ರತಿಕ್ರಿಯೆಯಾಗಿ ತನ್ನನ್ನು ಅವಮಾನಿಸುವಂತೆ ನಡೆದುಕೊಳ್ಳುವುದಿಲ್ಲವೋ, ಬೇರೆಯವರು ಪ್ರಹರಿಸಿದರೂ ಯಾರು ತಿರುಗಿ ಪ್ರಹರಿಸುವುದಿಲ್ಲವೋ ಹಾಗೂ ಆತ ಪ್ರಹರಿಸುವಂತೆಯೂ ನಡೆದುಕೊಳ್ಳುವುದಿಲ್ಲವೋ, ಕೊಲ್ಲಲು ಬಂದವನಿಗೂ ಒಂದಿನಿತೂ ತೊಂದರೆಯನ್ನು ಬಯಸುವುದಿಲ್ಲವೋ ಅಂತಹ ಮನುಷ್ಯನು ಬರಲೆಂದು (ಆತನೊಂದಿಗಿರಲು) ದೇವತೆಗಳೂ ಬಯಸುತ್ತಾರೆ. ॥ ೧೧ ॥

**ಅವ್ಯಾಹೃತಂ ವ್ಯಾಹೃತಾಚ್ಛ್ರೇಯ ಆಹುಃ**
**ಸತ್ಯಂ ವದೇದ್ ವ್ಯಾಹೃತಂ ತದ್ ದ್ವಿತೀಯಮ್ ।**
**ಪ್ರಿಯಂ ವದೇದ್ ವ್ಯಾಹೃತಂ ತತ್ ತೃತೀಯಂ**
**ಧರ್ಮಂ ವದೇದ್ ವ್ಯಾಹೃತಂ ತಚ್ಚತುರ್ಥಮ್ ॥ ೧೨ ॥**

ಮೌನದಿಂದಿರುವುದು ಮಾತನಾಡುವುದಕ್ಕಿಂತಲೂ ಶ್ರೇಷ್ಠವಾದದ್ದು. ಮಾತನಾಡಿದಲ್ಲಿ ಸತ್ಯವನ್ನೇ ನುಡಿಯಬೇಕು. ಇದು ಹಿಂದಿನದಕ್ಕಿಂತ ಹಿರಿದಾದುದು. ಆಡುವ ಮಾತು ಸತ್ಯವಾಗಿಯೂ, ಪ್ರಿಯವಾಗಿಯೂ ಇದ್ದರೆ ಅಲ್ಲಿ ಮೂರನೆಯ ವಿಶೇಷತೆ ಬಂದಂತೆ. ಸತ್ಯ ಮತ್ತು ಪ್ರಿಯವಾಕ್ಕುಗಳು ಧರ್ಮದಿಂದಲೂ ಕೂಡಿದ್ದರೆ ಅಲ್ಲಿ ನಾಲ್ಕನೇ ವಿಶೇಷತೆ ಇದ್ದಂತಾಗುತ್ತದೆ. ॥ ೧೨ ॥

**ಯಾದೃಶೈಃ ಸಂನಿವಿಶತೇ ಯಾದೃಶಾಂಶ್ಚೋಪಸೇವತೇ ।**
**ಯಾದೃಗಿಚ್ಛೇಚ್ಚ ಭವಿತುಂ ತಾದೃಗ್ ಭವತಿ ಪೂರುಷಃ ॥ ೧೩ ॥**

ಮನುಷ್ಯನು ಎಂತಹವರ ಸಹವಾಸ ಮಾಡುತ್ತಾನೆಯೋ, ಯಾರ ಸೇವೆ ಮಾಡುತ್ತಾನೆಯೋ, ಹೇಗಾಗಲು ಇಚ್ಛಿಸುತ್ತಾನೆಯೋ, ಹಾಗೆಯೇ ಆಗುತ್ತಾನೆ. ॥ ೧೩ ॥

**ಯತೋ ಯತೋ ನಿವರ್ತತೇ ತತಸ್ತತೋ ವಿಮುಚ್ಯತೇ ।**
**ನಿವರ್ತನಾದ್ಧಿ ಸರ್ವತೋ ನ ವೇತ್ತಿ ದುಃಖಮಣ್ವಪಿ ॥ ೧೪ ॥**

ಮನುಷ್ಯನು ಯಾವ ಯಾವ ವಸ್ತುಗಳಿಂದ ತನ್ನ ಮನಸ್ಸನ್ನು ಹಿಂತೆಗೆದುಕೊಳ್ಳುತ್ತಾನೆಯೋ ಆಯಾ ವಸ್ತುಗಳಿಂದ ಅವನು ವಿಮುಕ್ತನಾಗುತ್ತಾನೆ. ಪ್ರಪಂಚದ ಸಕಲವಸ್ತುಗಳಿಂದ ತನ್ನ ಮನಸ್ಸನ್ನು ಹಿಂತೆಗೆದುಕೊಂಡವನಿಗೆ ಅಣುಮಾತ್ರವಾದರೂ ದುಃಖವೆಂಬುದಿರುವುದಿಲ್ಲ. ॥ ೧೪ ॥

**ನ ಜೀಯತೇ ಚಾನುಜಿಗೀಷತೇಽನ್ಯಾ-**
**ನ್ನ ವೈರಕೃಚ್ಚಾಪ್ರತಿಘಾತಕಶ್ಚ ।**
**ನಿಂದಾಪ್ರಶಂಸಾಸು ಸಮಸ್ವಭಾವೋ**
**ನ ಶೋಚತೇ ಹೃಷ್ಯತಿ ನೈವ ಚಾಯಮ್ ॥ ೧೫ ॥**

ಪ್ರಾಪಂಚಿಕ ವ್ಯಾಪಾರಗಳಿಂದ ಪ್ರತಿನಿವೃತ್ತನಾದವನು ಬೇರೆಯವರಿಂ ಜಯಿಸಲ್ಪಡುವುದಿಲ್ಲ, ತಾನು ಇನ್ನೊಬ್ಬರನ್ನು ಜಯಿಸಲೂ ಕೂಡ ಇಚ್ಛಿಸುವುದಿ ಮತ್ತೊಬ್ಬರೊಂದಿಗೆ ವೈರಕಟ್ಟಿಕೊಳ್ಳುವುದಿಲ್ಲ, ಮತ್ತೊಬ್ಬರನ್ನು ಘಾಸಿಮಾಡಲ ಹೋಗುವುದಿಲ್ಲ, ನಿಂದೆಮಾಡಲಿ; ಪ್ರಶಂಸೆ ಮಾಡಲಿ – ಸಮಭಾವವ ಹೊಂದಿರುತ್ತಾನೆ. ಕಷ್ಟದಲ್ಲಿ ದುಃಖಿಸುವುದೂ ಇಲ್ಲ, ಸುಖ ಬಂದಾಗ ಸಂತೋಷಿಸುವುದ ಇಲ್ಲ. ॥ ೧೫ ॥

**ಭಾವಮಿಚ್ಛತಿ ಸರ್ವಸ್ಯ ನಾಭಾವೇ ಕುರುತೇ ಮನಃ ।**
**ಸತ್ಯವಾದೀ ಮೃದುರ್ದಾಂತೋ ಯಃ ಸ ಉತ್ತಮಪೂರುಷಃ ॥ ೧೬ ॥**

ಯಾರು ಎಲ್ಲರ ಕಲ್ಯಾಣವನ್ನು ಅಪೇಕ್ಷಿಸುವನೋ, ಕಲ್ಯಾಣಕರವಲ್ಲದ್ದ ಯಾರ ಬಗ್ಗೆಯೂ ಮನಸ್ಸಿನಲ್ಲಿಯೂ ಚಿಂತಿಸುವುದಿಲ್ಲವೋ, ಯಾ ಸತ್ಯನಿಷ್ಠನೋ, ಮೃದು ಸ್ವಭಾವದವನೋ, ಜಿತೇಂದ್ರಿಯನೋ, ಅಂತಹವ ಉತ್ತಮಪುರುಷನೆನಿಸಿಕೊಳ್ಳುತ್ತಾನೆ. ॥ ೧೬ ॥

**ನಾನರ್ಥಕಂ ಸಾಂತ್ವಯತಿ ಪ್ರತಿಜ್ಞಾಯ ದದಾತಿ ಚ ।**
**ರಂಧ್ರಂ ಪರಸ್ಯ ಜಾನಾತಿ ಯಃ ಸ ಮಧ್ಯಮಪೂರುಷಃ ॥ ೧೭ ॥**

ಯಾವನು ಸುಳ್ಳುಮಾತುಗಳಿಂದ ಮತ್ತೊಬ್ಬನನ್ನು ಸಂತೈಸಲು ಪ್ರಯತ್ನಿಸುವುದಿಲ್ಲವೋ ಕೊಡುವೆನೆಂದು ಪ್ರತಿಜ್ಞೆಮಾಡಿದುದನ್ನು ಖಂಡಿತವಾಗಿಯೂ ಕೊಡುತ್ತಾನೆಯೋ ಹಾಗ ಯಾರು ಇತರರಲ್ಲಿರುವ ದೋಷಗಳನ್ನು ತಿಳಿದುಕೊಂಡಿರುವನೋ ಅಂತಹವ ಮಧ್ಯಮಪುರುಷನೆಂದೆನಿಸಿಕೊಳ್ಳುತ್ತಾನೆ. ॥ ೧೭ ॥

**ದುಃಶಾಸನಸ್ತೂಪಹತೋಽಭಿಶಸ್ತೋ**
**ನಾವರ್ತತೇ ಮನ್ಯುವಶಾತ್ ಕೃತಘ್ನಃ ।**
**ನ ಕಸ್ಯಚಿನ್ಮಿತ್ರಮಥೋ ದುರಾತ್ಮಾ**
**ಕಲಾಶ್ಚೈತಾ ಅಧಮಸ್ಯೇಹ ಪುಂಸಃ ॥ ೧೮ ॥**

[illegible] ಯಾವನು ಎಲರಿಂದಲ

ಯಾರೊಡನೆಯೂ ಮೈತ್ರಿಯನ್ನೇ ಹೊಂದಿರುವುದಿಲ್ಲವೋ ಮತ್ತು ಯಾವನು ದುರಾತ್ಮನೋ - ಅಂತಹವನು ಮಾನವರಲ್ಲಿ ಅಧಮನೆಂದು ಪರಿಗಣಿತನಾಗುತ್ತಾನೆ. ॥ ೧೮ ॥

**ನ ಶ್ರದ್ದಧಾತಿ ಕಲ್ಯಾಣಂ ಪರೇಭ್ಯೋಽಪ್ಯಾತ್ಮಶಂಕಿತಃ ।**
**ನಿರಾಕರೋತಿ ಮಿತ್ರಾಣಿ ಯೋ ವೈ ಸೋಽಧಮಪೂರುಷಃ ॥ ೧೯ ॥**

ತನ್ನಲ್ಲಿಯೇ ತನಗೆ ನಂಬಿಕೆ ಇರದ ಕಾರಣ ಬೇರೆಯವರು ಒಳ್ಳೆಯದನ್ನೇ ಮಾಡಲು ಬಂದರೂ ನಂಬಿಕೆ ಇಲ್ಲದವನು, ಮಿತ್ರರನ್ನೂ ದೂರಮಾಡುವವನು - ಅಧಮಪುರುಷನೆಂದು ಪರಿಗಣಿತನಾಗುತ್ತಾನೆ. ॥ ೧೯ ॥

**ಉತ್ತಮಾನೇವ ಸೇವೇತ ಪ್ರಾಪ್ತಕಾಲೇ ತು ಮಧ್ಯಮಾನ್ ।**
**ಅಧಮಾಂಸ್ತು ನ ಸೇವೇತ ಯ ಇಚ್ಛೇದ್ ಭೂತಿಮಾತ್ಮನಃ ॥ ೨೦ ॥**

ಆತ್ಮೋನ್ನತಿಯನ್ನು ಬಯಸುವ ಮಾನವನು ಸತ್ಪುರುಷರ ಸೇವೆಯನ್ನೇ ಮಾಡಬೇಕು. ಕೆಲವೊಮ್ಮೆ ಮಧ್ಯಮಪುರುಷರ ಸೇವೆಯನ್ನು ಮಾಡಬೇಕಾಗಿ ಬರಬಹುದು. ಆದರೆ ಅಧಮರ ಸೇವೆಯನ್ನು ಅಥವಾ ಸಹವಾಸವನ್ನು ಎಂದಿಗೂ ಮಾಡಲೇಬಾರದು. ॥ ೨೦ ॥

**ಪ್ರಾಪ್ನೋತಿ ವೈ ವಿತ್ತಮಸದ್‌ಬಲೇನ**
**ನಿತ್ಯೋತ್ಥಾನಾತ್ ಪ್ರಜ್ಞಯಾ ಪೌರುಷೇಣ ।**
**ನ ತ್ವೇವ ಸಮ್ಯಗ್ ಲಭತೇ ಪ್ರಶಂಸಾಂ**
**ನ ವೃತ್ತಮಾಪ್ನೋತಿ ಮಹಾಕುಲಾನಾಮ್ ॥ ೨೧ ॥**

ಮಾನವನು ಅಸತ್ಪುರುಷನ ಭುಜಬಲದಿಂದಲೂ, ನಿರಂತರವಾದ ಪ್ರಯತ್ನದಿಂದಲೂ, ಬುದ್ಧಿಶಕ್ತಿಯಿಂದಲೂ, ಪೌರುಷದಿಂದಲೂ ಐಶ್ವರ್ಯವನ್ನು ಸಂಪಾದಿಸಬಹುದು. ಆದರೆ ಇದರಿಂದ ಅವನು ಕೇವಲ ಐಶ್ವರ್ಯವಂತನಾಗಲು ಸಾಧ್ಯವೇ ಹೊರತು ಪ್ರಶಂಸೆಗೆ ಪಾತ್ರನಾಗುವುದಿಲ್ಲ, ಮಹಾಕುಲಪ್ರಸೂತರಾದವರಿಗೆ ಯೋಗ್ಯವಾದ ಸದಾಚಾರಗಳನ್ನು ಹೊಂದಲು ಸಾಧ್ಯವಿಲ್ಲ. ॥ ೨೧ ॥

**ಧೃತರಾಷ್ಟ್ರ ಉವಾಚ**

**ಮಹಾಕುಲೇಭ್ಯಃ ಸ್ಪೃಹಯಂತಿ ದೇವಾ**
**ಧರ್ಮಾರ್ಥನಿತ್ಯಾಶ್ಚ ಬಹುಶ್ರುತಾಶ್ಚ ।**
**ಪೃಚ್ಛಾಮಿ ತ್ವಾಂ ವಿದುರ ಪ್ರಶ್ನಮೇತಂ**
**ಭವಂತಿ ವೈ ಕಾನಿ ಮಹಾಕುಲಾನಿ ॥ ೨೨ ॥**

ಧೃತರಾಷ್ಟ್ರನು ಹೇಳಿದನು - ವಿದುರ ! ಧರ್ಮಾರ್ಥಪರಾಯಣರಾದ ಬಹುಶ್ರುತರಾದ (ವೇದ-ವೇದಾಂಗಗಳನ್ನೂ, ಸಕಲ ಶಾಸ್ತ್ರಗಳನ್ನೂ ತಿಳಿದಿ ದೇವತೆಗಳೂ ಸಹ ಮಹಾಕುಲಪ್ರಸೂತರೊಡನೆ ಸಹವಾಸವನ್ನು ಬಯಸುತ್ತಾರಲ್ಲಾ ಈ ವಿಷಯದಲ್ಲಿ ನಾನೊಂದು ಪ್ರಶ್ನೆ ಹಾಕುತ್ತೇನೆ. ಎಂತಹ ಕುಲಗಳು ಮಹಾಕುಲಗಳ ಪರಿಗಣಿತವಾಗುತ್ತವೆ ? ॥ ೨೨ ॥

ವಿದುರ ಉವಾಚ

ತಪೋ ದಮೋ ಬ್ರಹ್ಮವಿತ್ತಂ ವಿತಾನಾಃ
ಪುಣ್ಯಾ ವಿವಾಹಾಃ ಸತತಾನ್ನದಾನಮ್ ।
ಯೇಷ್ವೇವೈತೇ ಸಪ್ತ ಗುಣಾ ವಸಂತಿ
ಸಮ್ಯಗ್‌ವೃತ್ತಾಸ್ತಾನಿ ಮಹಾಕುಲಾನಿ ॥ ೨೩ ॥

**ವಿದುರನು ಹೇಳಿದನು** - ಯಾವ ಕುಲದಲ್ಲಿ ತಪಸ್ಸು, ಜಿತೇಂದ್ರಿಯ ವೇದಾಧ್ಯಯನ, ಯಜ್ಞ, ಪವಿತ್ರವಾದ ವಿವಾಹಕ್ರಿಯೆಗಳು, ಸದಾ ಅನ್ನದಾನ ವ ಸದಾಚಾರ - ಈ ಏಳು ಗುಣಗಳು ಇರುತ್ತವೆಯೋ, ಅಂತಹ ಕುಲ ಮಹಾಕುಲಗಳೆಂದು ಪರಿಗಣಿಸಲ್ಪಡುತ್ತವೆ. ॥ ೨೩ ॥

ಯೇಷಾಂ ಹಿ ವೃತ್ತಂ ವ್ಯಥತೇ ನ ಯೋನಿ-
ಶ್ಚಿತ್ತಪ್ರಸಾದೇನ ಚರಂತಿ ಧರ್ಮಮ್ ।
ಯೇ ಕೀರ್ತಿಮಿಚ್ಛಂತಿ ಕುಲೇ ವಿಶಿಷ್ಟಾಂ
ತ್ಯಕ್ತಾನೃತಾಸ್ತಾನಿ ಮಹಾಕುಲಾನಿ ॥ ೨೪ ॥

ಯಾವ ಕುಲದಲ್ಲಿ ಸದಾಚಾರ-ಸದ್ವ್ಯವಹಾರಗಳು ಯಾವ ಕಾರಣದಿಂದ ಶಿಥಿಲಗೊಳ್ಳುವುದಿಲ್ಲವೋ, ಯಾವ ಕುಲದಲ್ಲಿ ಹುಟ್ಟಿದ ಸ್ತ್ರೀಪುರುಷರು ತಮ್ಮನ್ನು ಪ ತಂದೆತಾಯಿಗಳಿಗೆ ತಮ್ಮ ದೋಷಗಳಿಂದ ದುಃಖವನ್ನುಂಟುಮಾಡುವುದಿಲ್ಲವೋ, ಯ ಕುಲದವರು ಪ್ರಸನ್ನಾತ್ಮರಾಗಿ ಧರ್ಮಾಚರಣೆ ಮಾಡುತ್ತಿರುತ್ತಾರೆಯೋ ಮತ್ತು ಕುಲದ ಕೀರ್ತಿ ಪ್ರತಿಷ್ಠೆಗಳು ಹೆಚ್ಚಬೇಕೆಂಬ ಆಶಯದಿಂದಿರುತ್ತಾರೆಯೋ, ಯಾವ ಕುಲದವ ಅನೃತಭಾಷಣವನ್ನೇ ಸಂಪೂರ್ಣವಾಗಿ ಪರಿತ್ಯಜಿಸಿರುವರೋ ಅಂತಹವರಿರುವ ಕುಲ ಮಹಾಕುಲಗಳೆಂದು ಪರಿಗಣಿತವಾಗುತ್ತವೆ. ॥ ೨೪ ॥

ಯಜ್ಞಮಾಡದಿರುವುದು, ನೀಚಕುಲದವರೊಡನೆ ವಿವಾಹಸಂಬಂಧವನ್ನು ಬೆಳೆಸುವುದು, ವೇದಾಧ್ಯಯನ ಮಾಡದಿರುವುದು, ಧರ್ಮಾತಿಕ್ರಮಣ ಮಾಡುವುದು ಇತ್ಯಾದಿ ದುಷ್ಕಾರ್ಯಗಳಿಂದ ಮಹಾಕುಲಗಳು ಅಧಮಕುಲಗಳಾಗಿ ಪರಿವರ್ತನೆ ಹೊಂದುತ್ತವೆ ॥ ೨೫ ॥

**ದೇವದ್ರವ್ಯವಿನಾಶೇನ ಬ್ರಹ್ಮಸ್ವಹರಣೇನ ಚ ।**
**ಕುಲಾನ್ಯಕುಲತಾಂ ಯಾಂತಿ ಬ್ರಾಹ್ಮಣಾತಿಕ್ರಮೇಣ ಚ ॥ ೨೬ ॥**

ಯಜ್ಞಯಾಗಾದಿಗಳ ಮೂಲಕವಾಗಿ ದೇವತೆಗಳಿಗೆ ಸೇರಬೇಕಾದ ಹೋಮದ್ರವ್ಯವನ್ನು ನಾಶಮಾಡುವುದರಿಂದಲೂ, ಬ್ರಾಹ್ಮಣರ ಸ್ವತ್ತನ್ನು ಅಪಹರಿಸುವುದರಿಂದಲೂ ಮತ್ತು ಬ್ರಾಹ್ಮಣರನ್ನು ಅತಿಕ್ರಮಿಸಿ ಅಥವಾ ತಿರಸ್ಕರಿಸಿ ನಡೆಯುವುದರಿಂದಲೂ ಮಹಾಕುಲಗಳು ಕುತ್ಸಿತವಾದ ಕುಲಗಳಾಗಿ ಪರಿವರ್ತನೆ ಹೊಂದುತ್ತವೆ. ॥ ೨೬ ॥

**ಬ್ರಾಹ್ಮಣಾನಾಂ ಪರಿಭವಾತ್ ಪರಿವಾದಾಚ್ಚ ಭಾರತ ।**
**ಕುಲಾನ್ಯಕುಲತಾಂ ಯಾಂತಿ ನ್ಯಾಸಾಪಹರಣೇನ ಚ ॥ ೨೭ ॥**

ಬ್ರಾಹ್ಮಣರನ್ನು ಅನಾದರಿಸುವುದರಿಂದಲೂ, ನಿಂದೆ ಮಾಡುವುದರಿಂದಲೂ ಹಾಗೂ ನ್ಯಾಸವಾಗಿಟ್ಟ ದ್ರವ್ಯವನ್ನು ಅಪಹರಿಸುವುದರಿಂದಲೂ ಮಹಾಕುಲಗಳು ಹೀನಕುಲಗಳಾಗಿ ಪರಿವರ್ತಿತವಾಗುತ್ತವೆ. ॥ ೨೭ ॥

**ಕುಲಾನಿ ಸಮುಪೇತಾನಿ ಗೋಭಿಃ ಪುರುಷತೋಽರ್ಥತಃ ।**
**ಕುಲಸಂಖ್ಯಾಂ ನ ಗಚ್ಛಂತಿ ಯಾನಿ ಹೀನಾನಿ ವೃತ್ತತಃ ॥ ೨೮ ॥**

ಹಸುಗಳು, ಮನುಷ್ಯರು ಹಾಗೂ ಸಂಪತ್ತಿನಿಂದ ಒಂದು ಕುಲವು ಸಮೃದ್ಧವಾಗಿದ್ದೂ ಸದಾಚಾರದಿಂದ ಕೂಡಿರದಿದ್ದಲ್ಲಿ ಆ ಕುಲವನ್ನು ಉತ್ತಮಕುಲದ ಗಣನೆಯಲ್ಲಿ ಸೇರಿಸಲಾಗುವುದಿಲ್ಲ. ॥ ೨೮ ॥

**ವೃತ್ತತಸ್ತ್ವವಿಹೀನಾನಿ ಕುಲಾನ್ಯಲ್ಪಧನಾನ್ಯಪಿ ।**
**ಕುಲಸಂಖ್ಯಾಂ ಚ ಗಚ್ಛಂತಿ ಕರ್ಷಂತಿ ಚ ಮಹದ್ ಯಶಃ ॥ ೨೯ ॥**

ಯಾವುದೇ ಕುಲವು ಅಲ್ಪಸಂಪತ್ತಿನಿಂದ ಕೂಡಿದ್ದರೂ ಸದಾಚಾರದಿಂದ ಸಂಪನ್ನವಾಗಿದ್ದಲ್ಲಿ ಅದು ಉತ್ತಮ ಕುಲವೆಂದೇ ಪರಿಗಣಿಸಲ್ಪಡುತ್ತದೆ. ಆ ಕುಲವು ಮಹತ್ತಾದ ಯಶಸ್ಸನ್ನು ಪಡೆದುಕೊಳ್ಳುತ್ತದೆ. ॥ ೨೯ ॥

**ವೃತ್ತಂ ಯತ್ನೇನ ಸಂರಕ್ಷೇದ್ ವಿತ್ತಮೇತಿ ಚ ಯಾತಿ ಚ ।**
**ಅಕ್ಷೀಣೋ ವಿತ್ತತಃ ಕ್ಷೀಣೋ ವೃತ್ತತಸ್ತು ಹತೋ ಹತಃ ॥ ೩೦ ॥**

ಪ್ರಯತ್ನಪೂರ್ವಕವಾಗಿ ಸದ್ವ್ಯವಹಾರ-ಸದಾಚಾರಗಳನ್ನು ಕಾಪಾಡಿಕೊ ಬರಬೇಕು. ಹಣವಾದರೋ ಬರುತ್ತಿರುತ್ತದೆ. ಹೋಗುತ್ತಿರು ಐಶ್ವರ್ಯಹೀನನಾದವನು ದರಿದ್ರನೆನಿಸುವುದಿಲ್ಲ, ಆದರೆ ಚಾರಿತ್ರ್ಯಹೀನನಾದ ಬದುಕಿದ್ದರೂ ಸತ್ತಂತೆಯೇ. ॥ ೩೦ ॥

**ಗೋಭಿಃ ಪಶುಭಿರಶ್ವೈಶ್ಚ ಕೃಷ್ಯಾ ಚ ಸುಸಮೃದ್ಧಯಾ ।**
**ಕುಲಾನಿ ಚ ಪ್ರರೋಹಂತಿ ಯಾನಿ ಹೀನಾನಿ ವೃತ್ತತಃ ॥ ೩೧**

ಸದಾಚಾರದಿಂದ ಕೂಡಿರದ ವಂಶಗಳು ಗೋವುಗಳಿಂದ ಪಶುಗಳಿಂದಲೂ (ಆಡು - ಕುರಿ ಇತ್ಯಾದಿ), ಕುದುರೆಗಳಿಂದಲೂ ಸಮೃದ್ಧವಾಗಿದ್ದ ಕೃಷಿಯ ಉತ್ಪನ್ನಗಳಾದ ಧಾನ್ಯಾದಿಗಳಿಂದ ತುಂಬಿದ್ದರೂ ಸಹ ಉನ್ನತಿ ಹೊಂದಲಾರವು. ॥ ೩೧ ॥

**ಮಾ ನಃ ಕುಲೇ ವೈರಕೃತ್ ಕಶ್ಚಿದಸ್ತು**
**ರಾಜಾಮಾತ್ಯೋ ಮಾ ಪರಸ್ವಾಪಹಾರೀ ।**
**ಮಿತ್ರದ್ರೋಹೀ ನೈಕೃತಿಕೋಽನೃತೀ ವಾ**
**ಪೂರ್ವಾಶೀ ವಾ ಪಿತೃದೇವಾತಿಥಿಭ್ಯಃ ॥ ೩೨ ।**

ನಮ್ಮ ವಂಶದಲ್ಲಿ ಪರರನ್ನು ದ್ವೇಷಿಸುವವನು ಯಾವನೊಬ್ಬನೂ ಇಲ್ಲದಿ ಪರರ ಸ್ವತ್ತನ್ನು ಅಪಹರಿಸುವ ರಾಜನಾಗಲೀ, ಅಮಾತ್ಯನಾಗಲೀ ಇಲ್ಲದಿರಲಿ. ನ ಕುಲದಲ್ಲಿ ಮಿತ್ರದ್ರೋಹಿಯಾಗಲೀ, ವಂಚಕನಾಗಲೀ, ಅನೃತಭಾಷಿಯಾ ಇಲ್ಲದಿರಲಿ. ತಂದೆ, ತಾಯಿ, ದೇವತೆ ಹಾಗೂ ಅತಿಥಿಗಳಿಗೆ ನಿವೇದನೆ ಮಾಡ ಮೊದಲೇ ಭೋಜನ ಮಾಡುವವನೂ ಸಹ ನಮ್ಮ ಕುಲದಲ್ಲಿಲ್ಲದಿರಲಿ. ॥ ೩೨ ॥

**ಯಶ್ಚ ನೋ ಬ್ರಾಹ್ಮಣಾನ್ ಹನ್ಯಾದ್ಯಶ್ಚ ನೋ ಬ್ರಾಹ್ಮಣಾನ್ ದ್ವಿಷೇತ್ ।**
**ನ ನಃ ಸ ಸಮಿತಿಂ ಗಚ್ಛೇದ್ಯಶ್ಚ ನೋ ನಿರ್ವಪೇತ್ ಪಿತೄನ್ ॥ ೩೩**

ನಮ್ಮ ಕುಲದಲ್ಲಿನ ಯಾವ ವ್ಯಕ್ತಿಯು ಬ್ರಹ್ಮಹತ್ಯೆಯನ್ನು ಮಾಡುತ್ತಾನೆಯೆ ಯಾರು ಬ್ರಾಹ್ಮಣರನ್ನು ದ್ವೇಷಿಸುತ್ತಾನೆಯೋ ಮತ್ತು ಯಾರು ಪಿತೃಗಳಿಗೆ ತರ್ಪ ಪಿಂಡಪ್ರದಾನಾದಿಗಳನ್ನು ಮಾಡುವುದಿಲ್ಲವೋ ಅಂತಹವನು ನಮ್ಮ ಸಹವಾ ಬರದಿರಲಿ. ॥ ೩೩ ॥

ಅತಿಥಿಯಾಗಿ ಬಂದವನಿಗೆ ಕುಳಿತುಕೊಳ್ಳಲು ದರ್ಭಾಸನ ಮತ್ತು ಸ್ಥಳ, ಕೈಕಾಲು ತೊಳೆಯಲು ನೀರು, ಸುಮಧುರವಾದ ಮಾತು - ಈ ನಾಲ್ಕು ಸತ್ಪುರುಷರ ಮನೆಗಳಲ್ಲಿ ಎಂದೆಂದಿಗೂ ಇಲ್ಲವೆಂಬುದಿಲ್ಲ. ॥ ೩೪ ॥

**ಶ್ರದ್ಧಯಾ ಪರಯಾ ರಾಜನ್ನುಪನೀತಾನಿ ಸತ್ಕೃತಿಮ್ ।**
**ಪ್ರವೃತ್ತಾನಿ ಮಹಾಪ್ರಾಜ್ಞ ಧರ್ಮಿಣಾಂ ಪುಣ್ಯಕರ್ಮಿಣಾಮ್ ॥ ೩೫ ॥**

ಮಹಾಪ್ರಾಜ್ಞನೇ ! ಧರ್ಮಿಷ್ಠರಾದ, ಪುಣ್ಯಕರ್ಮಿಗಳಾದ ಮಹಾತ್ಮರ ಬಳಿ, ಹೆಚ್ಚಿನ ಶ್ರದ್ಧಾಭಕ್ತಿಗಳಿಂದ ಸತ್ಕಾರಮಾಡುವ ಸಲುವಾಗಿಯೇ ಮೇಲೆ ಹೇಳಿದ ತೃಣ-ಭೂಮ್ಯಾದಿಗಳು ಸರ್ವದಾ ಸಿದ್ಧವಾಗಿರುತ್ತವೆ. ॥ ೩೫ ॥

**ಸೂಕ್ಷ್ಮೋಽಪಿ ಭಾರಂ ನೃಪತೇ ಸ್ಯಂದನೋ ವೈ**
**ಶಕ್ತೋ ವೋಢುಂ ನ ತಥಾನ್ಯೇ ಮಹೀಜಾಃ ।**
**ಏವಂ ಯುಕ್ತಾ ಭಾರಸಹಾ ಭವಂತಿ**
**ಮಹಾಕುಲೀನಾ ನ ತಥಾನ್ಯೇ ಮನುಷ್ಯಾಃ ॥ ೩೬ ॥**

ರಥವು ಗಾತ್ರದಲ್ಲಿ ಚಿಕ್ಕದಾಗಿದ್ದರೂ ಮಹಾಭಾರವನ್ನು ಹೊರಲು ಸಮರ್ಥವಾಗುತ್ತದೆ. ಬೇರೆಯ ಮರಗಳು ಗಾತ್ರದಲ್ಲಿ ದೊಡ್ಡದಾಗಿದ್ದರೂ ಸಹ ಹೆಚ್ಚು ಭಾರವನ್ನು ಹೊರಲಾರವು. ಇದೇ ರೀತಿಯಲ್ಲಿ ಮಹಾಕುಲಪ್ರಸೂತರು ಹೆಚ್ಚಿನ ಜವಾಬ್ದಾರಿಯನ್ನು ವಹಿಸಿಕೊಳ್ಳಲು ಸಮರ್ಥರಾಗಿರುತ್ತಾರೆ. ಇತರ ಸಾಧಾರಣ ಮನುಷ್ಯರು ಹೆಚ್ಚು ಜವಾಬ್ದಾರಿಯನ್ನು ಹೊರಲಾರರು. ॥ ೩೬ ॥

**ನ ತನ್ಮಿತ್ರಂ ಯಸ್ಯ ಕೋಪಾದ್ ಬಿಭೇತಿ**
**ಯದ್ ವಾ ಮಿತ್ರಂ ಶಂಕಿತೇನೋಪಚರ್ಯಮ್ ।**
**ಯಸ್ಮಿನ್ ಮಿತ್ರೇ ಪಿತರೀವಾಶ್ವಸೀತ**
**ತದ್ ವೈ ಮಿತ್ರಂ ಸಂಗತಾನೀತರಾಣಿ ॥ ೩೭ ॥**

ಯಾವನ ಕೋಪದಿಂದ ಭಯಪಡಬೇಕಾಗುವುದೋ ಹಾಗೂ ಭಯದಿಂದ ಯಾರ ಉಪಚಾರವನ್ನು ಮಾಡಬೇಕಾಗುವುದೋ ಅವನು ಮಿತ್ರನಲ್ಲ. ತಂದೆಯಲ್ಲಿ ವಿಶ್ವಾಸವಿಡುವಂತೆ ಯಾರ ವಿಷಯದಲ್ಲಿ ವಿಶ್ವಾಸವಿಡಬಹುದೋ ಅಂತಹವನು ಮಾತ್ರವೇ ಮಿತ್ರನೆನಿಸಿಕೊಳ್ಳುತ್ತಾನೆ. ಉಳಿದವರೆಲ್ಲರೂ ಕೇವಲ ಸಂಗಡಿಗರೆನಿಸಿಕೊಳ್ಳುತ್ತಾರೆ. ॥ ೩೭ ॥

**ಯಃ ಕಶ್ಚಿದಪ್ಯಸಂಬದ್ಧೋ ಮಿತ್ರಭಾವೇನ ವರ್ತತೇ ।**
**ಸ ಏವ ಬಂಧುಸ್ತನ್ಮಿತ್ರಂ ಸಾ ಗತಿಸ್ತತ್ ಪರಾಯಣಮ್ ॥ ೩೮ ॥**

ಯಾರು, ಯಾವುದೇ ವಿಧವಾದ ಪೂರ್ವಸಂಬಂಧವಿಲ್ಲದಿದ್ದರೂ ಸ ಮಿತ್ರಭಾವದಿಂದ ವರ್ತಿಸುವನೋ ಅವನೇ ಬಂಧು, ಅವನೇ ಮಿತ್ರ, ಅವನೇ ಶರಣ ಅವನೇ ಆಶ್ರಯದಾತನು. ॥ ೩೮ ॥

**ಚಲಚಿತ್ತಸ್ಯ ವೈ ಪುಂಸೋ ವೃದ್ಧಾನನುಪಸೇವತಃ ।**
**ಪಾರಿಪ್ಲವಮತೇರ್ನಿತ್ಯಮಧ್ರುವೋ ಮಿತ್ರಸಂಗ್ರಹಃ ॥ ೩೯ ॥**

ಯಾವನ ಚಿತ್ತವು ಚಂಚಲವಾಗಿರುತ್ತದೆಯೋ, ಯಾವನು ಹಿರಿಯರ ಸೇವೆಯ ಮಾಡಿರುವುದಿಲ್ಲವೋ ಅಂತಹ ಅನಿಶ್ಚಿತಮತಿಯಾದ ಮನುಷ್ಯನಿಗೆ ಮಿತ್ರಸಂಗ್ರಹವ ಸಹ ಅನಿಶ್ಚಿತವಾಗಿಯೇ ಇರುತ್ತದೆ. ॥ ೩೯ ॥

**ಚಲಚಿತ್ತಮನಾತ್ಮಾನಮಿಂದ್ರಿಯಾಣಾಂ ವಶಾನುಗಮ್ ।**
**ಅರ್ಥಾಃ ಸಮಭಿವರ್ತಂತೇ ಹಂಸಾಃ ಶುಷ್ಕಂ ಸರೋ ಯಥಾ ॥ ೪೦ ॥**

ಹಂಸಪಕ್ಷಿಗಳು ಶುಷ್ಕವಾಗಿರುವ ಸರೋವರದ ಸುತ್ತಲೂ ತಿರುಗಾಡುತ್ತವೆಯಾದರು ಹೇಗೆ ಒಳಗೆ ಪ್ರವೇಶಿಸುವುದಿಲ್ಲವೋ ಹಾಗೆಯೇ ಸ್ಥಿರಮತಿಯಿಲ್ಲದವನನ್ನೂ ಅಜ್ಞಾನಿಯನ್ನೂ ಇಂದ್ರಿಯಗಳಿಗೆ ದಾಸನಾಗಿರುವವನನ್ನೂ ಪುರುಷಾರ್ಥಗಳು ಪರಿತ್ಯಜಿ ಹೊರಟು ಹೋಗುತ್ತವೆ. ॥ ೪೦ ॥

**ಅಕಸ್ಮಾದೇವ ಕುಪ್ಯಂತಿ ಪ್ರಸೀದಂತ್ಯನಿಮಿತ್ತತಃ ।**
**ಶೀಲಮೇತದಸಾಧೂನಾಮಭ್ರಂ ಪಾರಿಪ್ಲವಂ ಯಥಾ ॥ ೪೧ ॥**

ಕ್ಷಣಕ್ಷಣಕ್ಕೂ ವ್ಯತ್ಯಸ್ತಗೊಳ್ಳುವ ಮೋಡದಂತೆ ದುಷ್ಟರು ಇದ್ದಕ್ಕಿದ್ದಂತೆ ಕೋಪಿಸಿಕೊಳ್ಳುತ್ತಾ ಹಾಗೂ ಯಾವ ಕಾರಣವೂ ಇಲ್ಲದೆಯೇ ಪ್ರಸನ್ನರಾಗುತ್ತಾರೆ. ॥ ೪೧ ॥

**ಸತ್ಕೃತಾಶ್ಚ ಕೃತಾರ್ಥಾಶ್ಚ ಮಿತ್ರಾಣಾಂ ನ ಭವಂತಿ ಯೇ ।**
**ತಾನ್ ಮೃತಾನಪಿ ಕ್ರವ್ಯಾದಾಃ ಕೃತಘ್ನಾನ್ನೋಪಭುಂಜತೇ ॥ ೪೨ ॥**

ಯಾರು ಮಿತ್ರರಿಂದ ಸತ್ಕೃತನಾಗಿ, ಅವರ ಸಹಾಯದಿಂದಲೇ ಅನೇಕಕಾರ್ಯಗಳನು ಸಾಧಿಸಿಕೊಂಡು ಕೃತಕೃತ್ಯನಾಗಿ, ಅನಂತರ ಅಂತಹ ಮಿತ್ರನಿಗೆ ಕೃತಘ್ನನಾಗಿರುವನೊ

**ಅರ್ಚಯೇದೇವ ಮಿತ್ರಾಣಿ ಸತಿ ವಾಸತಿ ವಾ ಧನೇ।**
**ನಾನರ್ಥಯನ್ ಪ್ರಜಾನಾತಿ ಮಿತ್ರಾಣಾಂ ಸಾರಫಲ್ಗುತಾಮ್ ॥ ೪೩ ॥**

ಒಬ್ಬನಲ್ಲಿ ಧನವಿರಲಿ, ಇಲ್ಲದಿರಲಿ – ಮಿತ್ರರನ್ನು ಸತ್ಕರಿಸಲೇಬೇಕು. ಮಿತ್ರನಿಂದ ಏನನ್ನೂ ಬೇಡಬಾರದು. ಗುಣದೋಷಗಳ ಪರೀಕ್ಷೆಯನ್ನೂ ಮಾಡಬಾರದು. ॥ ೪೩ ॥

**ಸಂತಾಪಾದ್ ಭ್ರಶ್ಯತೇ ರೂಪಂ ಸಂತಾಪಾದ್ ಭ್ರಶ್ಯತೇ ಬಲಮ್।**
**ಸಂತಾಪಾದ್ ಭ್ರಶ್ಯತೇ ಜ್ಞಾನಂ ಸಂತಾಪಾದ್ ವ್ಯಾಧಿಮೃಚ್ಛತಿ ॥ ೪೪ ॥**

ಸಂತಾಪದಿಂದ (ಇಷ್ಟವಾದ ವಸ್ತುವಿನ ವಿಯೋಗದಿಂದುಂಟಾದ ಶೋಕದಿಂದ) ರೂಪವು ನಷ್ಟವಾಗುತ್ತದೆ. ಬಲವು ನಷ್ಟವಾಗುತ್ತದೆ. ಜ್ಞಾನವು ನಷ್ಟವಾಗುತ್ತದೆ. ಸಂತಾಪಗೊಂಡವನು ಶೋಕತಪ್ತನಾಗಿ ವ್ಯಾಧಿಯಿಂದ ಪೀಡಿತನಾಗುತ್ತಾನೆ. ॥ ೪೪ ॥

**ಅನವಾಪ್ಯಂ ಚ ಶೋಕೇನ ಶರೀರಂ ಚೋಪತಪ್ಯತೇ।**
**ಅಮಿತ್ರಾಶ್ಚ ಪ್ರಹೃಷ್ಯಂತಿ ಮಾ ಸ್ಮ ಶೋಕೇ ಮನಃ ಕೃಥಾಃ ॥ ೪೫ ॥**

ಶೋಕಿಸುವುದರಿಂದ ಅಭೀಷ್ಟವಾದ ವಸ್ತುವು ಪ್ರಾಪ್ತವಾಗುವುದಿಲ್ಲ. ಬದಲಾಗಿ ಕೇವಲ ಶರೀರವು ಪರಿತಪ್ತವಾಗುತ್ತದೆ ಹಾಗೂ ಶತ್ರುಗಳು ಸಂತುಷ್ಟರಾಗುತ್ತಾರೆ. ಆದುದರಿಂದ ಮನಸ್ಸನ್ನು ಶೋಕಭೂಯಿಷ್ಠವನ್ನಾಗಿ ಮಾಡಬೇಡ. ॥ ೪೫ ॥

**ಪುನರ್ನರೋ ಮ್ರಿಯತೇ ಜಾಯತೇ ಚ**
**ಪುನರ್ನರೋ ಹೀಯತೇ ವರ್ಧತೇ ಚ।**
**ಪುನರ್ನರೋ ಯಾಚತಿ ಯಾಚ್ಯತೇ ಚ**
**ಪುನರ್ನರಃ ಶೋಚತಿ ಶೋಚ್ಯತೇ ಚ ॥ ೪೬ ॥**

ಮಾನವನು ಪುನಃ ಪುನಃ ಸಾಯುತ್ತಿರುತ್ತಾನೆ ಹಾಗೂ ಹುಟ್ಟುತ್ತಿರುತ್ತಾನೆ. ಮತ್ತೆ ಮತ್ತೆ ಕ್ಷಯಿಸುತ್ತಿರುತ್ತಾನೆ; ವೃದ್ಧಿಹೊಂದುತ್ತಿರುತ್ತಾನೆ. ಪುನಃ ಪುನಃ ಯಾಚಿಸುತ್ತಿರುತ್ತಾನೆ. ಬೇರೆಯವರಿಂದ ಯಾಚಿಸಲ್ಪಡುತ್ತಿರುತ್ತಾನೆ. ಮತ್ತೆ ಮತ್ತೆ ಶೋಕಿಸುತ್ತಿರುತ್ತಾನೆ. ಬೇರೆಯವರು ಶೋಕಿಸುವಂತೆ ಮಾಡುತ್ತಿರುತ್ತಾನೆ. ॥ ೪೬ ॥

**ಸುಖಂ ಚ ದುಃಖಂ ಚ ಭವಾಭವೌ ಚ**
**ಲಾಭಾಲಾಭೌ ಮರಣಂ ಜೀವಿತಂ ಚ।**
**ಪರ್ಯಾಯಶಃ ಸರ್ವಮೇತೇ ಸ್ಪೃಶಂತಿ**
**ತಸ್ಮಾದ್ ಧೀರೋ ನ ಚ ಹೃಷ್ಯೇನ್ನ ಶೋಚೇತ್ ॥ ೪೭ ॥**

ಸುಖಃ-ದುಃಖ, ಉತ್ಪತ್ತಿ-ವಿನಾಶ, ಲಾಭ-ಹಾನಿ ಹಾಗೂ ಜೀವನ-ಮರಣ ಇವು ಮನುಷ್ಯನಿಗೆ ಪುನಃ ಪುನಃ ಪ್ರಾಪ್ತವಾಗುತ್ತಲೇ ಇರುತ್ತವೆ. ಆದ್ದರಿಂ ಧೀರನಾದವನು ಇವುಗಳಿಗಾಗಿ ಹರ್ಷಪಡುವುದನ್ನಾಗಲೀ ಶೋಕಿಸುವುದನ್ನಾಗಲಿ ಮಾಡಬಾರದು. ॥ ೪೭ ॥

**ಚಲಾನಿ ಹೀಮಾನಿ ಷಡಿಂದ್ರಿಯಾಣಿ**
**ತೇಷಾಂ ಯದ್ ಯದ್ ವರ್ಧತೇ ಯತ್ರ ಯತ್ರ ।**
**ತತಸ್ತತಃ ಸ್ರವತೇ ಬುದ್ಧಿರಸ್ಯ**
**ಛಿದ್ರೋದಕುಂಭಾದಿವ ನಿತ್ಯಮಂಭಃ ॥ ೪೮ ॥**

ಮನುಷ್ಯನಲ್ಲಿರುವ ಈ ಆರು ಇಂದ್ರಿಯಗಳು ತುಂಬ ಚಂಚಲವಾದವುಗಳು. ಯಾವ ಯಾವ ಇಂದ್ರಿಯಗಳ ಗಮನವು ಯಾವ ಯಾವ ವಿಷಯಗಳ ಕಡೆಗೆ ಚಲಿಸಿ ವರ್ಧಿಸುತ್ತಿರುವುದೋ ಅದೇ ವಿಷಯಗಳ ಕಡೆಗೆ ಬುದ್ಧಿಯೂ ಸಹ - ತೂತಾದ ಮಡಕೆಯಿಂದ ನೀರು ಸ್ರವಿಸುವಂತೆ ಸ್ರವಿಸುತ್ತದೆ. ॥ ೪೮ ॥

**ಧೃತರಾಷ್ಟ್ರ ಉವಾಚ**

**ತನುರುದ್ಧಃ ಶಿಖೀ ರಾಜಾ ಮಿಥ್ಯೋಪಚರಿತೋ ಮಯಾ ।**
**ಮಂದಾನಾಂ ಮಮ ಪುತ್ರಾಣಾಂ ಯುದ್ಧೇನಾಂತಂ ಕರಿಷ್ಯತಿ ॥ ೪೯ ॥**

**ಧೃತರಾಷ್ಟ್ರನು ಹೇಳಿದನು** - ಧರ್ಮರೂಪವಾದ ಶರೀರದಲ್ಲಿ ಬಂಧಿತನಾಗಿರುವ ಸಾಕ್ಷಾತ್ ಯಜ್ಞೇಶ್ವರನಂತೆಯೇ ಕಾಣುತ್ತಿರುವ ಯುಧಿಷ್ಠಿರರಾಜನು ನನ್ನಿಂದ ಮೋಸಗೊಳಿಸಲ್ಪಟ್ಟಿದ್ದಾನೆ. ಈ ಕಾರಣದಿಂದಲೇ ಅವನು ಯುದ್ಧದಲ್ಲಿ ಮಂದಬುದ್ಧಿಯುಳ್ಳ ನನ್ನ ಮಕ್ಕಳನ್ನು ಅಂತ್ಯಗೊಳಿಸುತ್ತಾನೆ. ॥ ೪೯ ॥

**ನಿತ್ಯೋದ್ವಿಗ್ನಮಿದಂ ಸರ್ವಂ ನಿತ್ಯೋದ್ವಿಗ್ನಮಿದಂ ಮನಃ ।**
**ಯತ್ ತತ್ ಪದಮನುದ್ವಿಗ್ನಂ ತನ್ಮೇ ವದ ಮಹಾಮತೇ ॥ ೫೦ ॥**

ಈ ಎಲ್ಲವೂ ಭಯದಿಂದಲೇ ವ್ಯಾಪ್ತವಾಗಿದೆ. ನನ್ನ ಮನಸ್ಸೂ ಸಹ ಪ್ರತಿನಿತ್ಯವೂ

ವಿದುರ ಉವಾಚ

ನಾನ್ಯತ್ರ ವಿದ್ಯಾತಪಸೋರ್ನಾನ್ಯತ್ರೇಂದ್ರಿಯನಿಗ್ರಹಾತ್ ।
ನಾನ್ಯತ್ರ ಲೋಭಸಂತ್ಯಾಗಾಚ್ಛಾಂತಿಂ ಪಶ್ಯಾಮಿ ತೇಽನಘ ॥ ೫೧ ॥

ವಿದುರನು ಹೇಳಿದನು - ಹೇ ಪಾಪರಹಿತನೇ! ಜ್ಞಾನ, ತಪಸ್ಸು, ಇಂದ್ರಿಯನಿಗ್ರಹ ಹಾಗೂ ಲೋಭದ ಸಂಪೂರ್ಣ ತ್ಯಾಗ - ಇವುಗಳ ಹೊರತಾಗಿ ಬೇರಾವುದರಿಂದಲೂ ನಿನಗೆ ಶಾಂತಿ ಸಿಗುವುದೆಂಬುದನ್ನು ನಾನು ಕಾಣೆನು. ॥ ೫೧ ॥

ಬುದ್ಧ್ಯಾ ಭಯಂ ಪ್ರಣುದತಿ ತಪಸಾ ವಿಂದತೇ ಮಹತ್ ।
ಗುರುಶುಶ್ರೂಷಯಾ ಜ್ಞಾನಂ ಶಾಂತಿಂ ಯೋಗೇನ ವಿಂದತಿ ॥ ೫೨ ॥

ಸಾಧಕನಾದ ಮನುಷ್ಯನು ಬುದ್ಧಿಯಿಂದ ತನ್ನ ಭಯವನ್ನು ದೂರಮಾಡಿಕೊಳ್ಳುತ್ತಾನೆ. ತಪಸ್ಸಿನಿಂದ ಮಹತ್ತ್ವವನ್ನು ಪಡೆಯುತ್ತಾನೆ. ಗುರುಶುಶ್ರೂಷೆಯಿಂದ ಜ್ಞಾನವನ್ನು ಪಡೆಯುತ್ತಾನೆ. ಮನಸ್ಸನ್ನು ಪರಮಾತ್ಮನಲ್ಲಿ ಸೇರಿಸುವುದರಿಂದ (ಯೋಗಾಭ್ಯಾಸದಿಂದ) ಶಾಂತಿಯನ್ನು ಪಡೆಯುತ್ತಾನೆ. ॥ ೫೨ ॥

ಅನಾಶ್ರಿತಾ ದಾನಪುಣ್ಯಂ ವೇದಪುಣ್ಯಮನಾಶ್ರಿತಾಃ ।
ರಾಗದ್ವೇಷವಿನಿರ್ಮುಕ್ತಾ ವಿಚರಂತೀಹ ಮೋಕ್ಷಿಣಃ ॥ ೫೩ ॥

ಮೋಕ್ಷಾಪೇಕ್ಷಿಗಳು ದಾನಮಾಡುವುದರಿಂದ ಪ್ರಾಪ್ತವಾಗುವ ಪುಣ್ಯವನ್ನು ಆಶ್ರಯಿಸತಕ್ಕವರಲ್ಲ. ವೇದಾಧ್ಯಯನದಿಂದ ಅಥವಾ ವೇದವಿಹಿತವಾದ ಕರ್ಮಗಳಿಂದ ಪ್ರಾಪ್ತವಾಗುವ ಪುಣ್ಯವನ್ನೂ ಆಶ್ರಯಿಸತಕ್ಕವರಲ್ಲ. ಇವರು ರಾಗ-ದ್ವೇಷಾದಿಗಳನ್ನು ಸಂಪೂರ್ಣವಾಗಿ ತ್ಯಜಿಸಿ (ಕೇವಲ ಅಧ್ಯಾತ್ಮ ಚಿಂತನೆಯಲ್ಲಿಯೇ ನಿರತರಾಗಿರುತ್ತ) ಲೋಕದಲ್ಲಿ ಪರ್ಯಟನ ಮಾಡುತ್ತಿರುತ್ತಾರೆ. ॥ ೫೩ ॥

ಸ್ವಧೀತಸ್ಯ ಸುಯುದ್ಧಸ್ಯ ಸುಕೃತಸ್ಯ ಚ ಕರ್ಮಣಃ ।
ತಪಸಶ್ಚ ಸುತಪ್ತಸ್ಯ ತಸ್ಯಾಂತೇ ಸುಖಮೇಧತೇ ॥ ೫೪ ॥

ಸರಿಯಾಗಿ ಮಾಡಿದ ಅಧ್ಯಯನ, ನ್ಯಾಯೋಚಿತವಾದ ಯುದ್ಧ, ಪುಣ್ಯಪ್ರದವಾದ ಸತ್ಕರ್ಮ, ಶ್ರದ್ಧೆ-ನಿಷ್ಠೆಗಳಿಂದ ಮಾಡಿದ ತಪಸ್ಸು - ಇವುಗಳ ಕೊನೆಯಲ್ಲಿ ಸುಖವು ವೃದ್ಧಿಸುತ್ತದೆ. ॥ ೫೪ ॥

ಸ್ವಾಸ್ತೀರ್ಣಾನಿ ಶಯನಾನಿ ಪ್ರಪನ್ನಾ
ನ ವೈ ಭಿನ್ನಾ ಜಾತು ನಿದ್ರಾಂ ಲಭಂತೇ ।
ನ ಸ್ತ್ರೀಷು ರಾಜನ್ ರತಿಮಾಪ್ನುವಂತಿ
ನ ಮಾಗಧೈಃ ಸ್ತೂಯಮಾನಾ ನ ಸೂತೈಃ ॥ ೫೫ ॥

ಜ್ಞಾತಿಗಳಿಂದ ಭಿನ್ನರಾದವರು (ಬಾಂಧವರೊಡನೆ ಜಗಳ ಮಾಡಿ ದೂರಾದವರು) ಹಂಸತೂಲಿಕಾತಲ್ಪದ ಮೇಲೆ ಮಲಗಿದ್ದರೂ ಸಹ ನಿದ್ದೆಯನ್ನು ಪಡೆಯುವುದಿಲ್ಲ. ಪತ್ನಿಯರೊಡನೆ ರಮಿಸುವ ಆಸಕ್ತಿಯೂ ಅವರಿಗಿರುವುದಿಲ್ಲ. ವಂದಿಮಾಗಧರ ಹೊಗಳಿಕೆಯಿಂದಲೂ ಅವರು ಸುಖವನ್ನನುಭವಿಸುವುದಿಲ್ಲ. ॥ ೫೫ ॥

ನ ವೈ ಭಿನ್ನಾ ಜಾತು ಚರಂತಿ ಧರ್ಮಂ
ನ ವೈ ಸುಖಂ ಪ್ರಾಪ್ನುವಂತೀಹ ಭಿನ್ನಾಃ।
ನ ವೈ ಭಿನ್ನಾ ಗೌರವಂ ಪ್ರಾಪ್ನುವಂತಿ
ನ ವೈ ಭಿನ್ನಾಃ ಪ್ರಶಮಂ ರೋಚಯಂತಿ ॥ ೫೬ ॥

ಯಾರು ಪರಸ್ಪರ ಭೇದಭಾವನೆಗಳನ್ನಿಟ್ಟುಕೊಂಡಿರುತ್ತಾರೋ, ಅವರು ಎಂದೂ ಧರ್ಮಾಚರಣೆಯನ್ನು ಮಾಡುವುದಿಲ್ಲ. ಎಂದೂ ಸುಖವನ್ನು ಪಡೆಯುವುದಿಲ್ಲ. ಅವರೆಂದೂ ಬೇರೆಯವರ ಗೌರವಕ್ಕೆ ಪಾತ್ರರಾಗುವುದಿಲ್ಲ ಹಾಗೂ ಶಾಂತಿಯನ್ನೆಂದೂ ಪಡೆಯರು. ॥ ೫೬ ॥

ನ ವೈ ತೇಷಾಂ ಸ್ವದತೇ ಪಥ್ಯಮುಕ್ತಂ
ಯೋಗಕ್ಷೇಮಂ ಕಲ್ಪತೇ ನೈವ ತೇಷಾಮ್।
ಭಿನ್ನಾನಾಂ ವೈ ಮನುಜೇಂದ್ರ ಪರಾಯಣಂ
ನ ವಿದ್ಯತೇ ಕಿಂಚಿದನ್ಯದ್ ವಿನಾಶಾತ್ ॥ ೫೭ ॥

ಜ್ಞಾತಿಗಳೊಡನೆ ದ್ವೇಷಕಟ್ಟಿಕೊಂಡಿರುವವರಿಗೆ ಹೇಳುವ ಪಥ್ಯದ ಮಾತುಗಳೂ ಸಹ ರುಚಿಸುವುದಿಲ್ಲ. ಇಂತಹವರ ಯೋಗಕ್ಷೇಮವೂ ಸ್ಥಿರವಾಗಿ ಉಳಿಯುವುದಿಲ್ಲ. ಈ ಜ್ಞಾತಿದ್ವೇಷಕರಿಗೆ ವಿನಾಶದ ಹೊರತಾಗಿ ಬೇರೆ ಗತಿಯೇ ಇರುವುದಿಲ್ಲ. ॥ ೫೭ ॥

ಸಂಪನ್ನಂ ಗೋಷು ಸಂಭಾವ್ಯಂ ಸಂಭಾವ್ಯಂ ಬ್ರಾಹ್ಮಣೇ ತಪಃ।
ಸಂಭಾವ್ಯಂ ಚಾಪಲಂ ಸ್ತ್ರೀಷು ಸಂಭಾವ್ಯಂ ಜ್ಞಾತಿತೋ ಭಯಮ್ ॥ ೫೮ ॥

ಗೋವುಗಳಲ್ಲಿ ಹಾಲಿನ ಸಮೃದ್ಧಿಯಿರುವುದು ಸ್ವಾಭಾವಿಕವಾಗಿರುತ್ತದೆ. ಬ್ರಾಹ್ಮಣನಲ್ಲಿ ತಪಸ್ಸು, ಸ್ತ್ರೀಯರಲ್ಲಿ ಚಾಂಚಲ್ಯವಿರುವುದೂ ಸ್ವಾಭಾವಿಕವಾಗಿರುತ್ತದೆ. ಅಂತೆಯೇ ಜ್ಞಾತಿಗಳ ದೆಸೆಯಿಂದ ಭಯವಿರುವುದೂ ಸಹ ಸ್ವಾಭಾವಿಕವಾಗಿರುತ್ತದೆ. ॥ ೫೮ ॥

ಸೂಕ್ಷ್ಮವಾದ ದಾರಕ್ಕೆ ಬಲವಿಲ್ಲವಾದರೂ, ಸಾವಿರಾರು ತಂತುಗಳನ್ನು ಸೇರಿಸಿ ಹೊಸೆದ ಹಗ್ಗ ಬಲವಾಗಿದ್ದು ಅನೇಕ ವರ್ಷಗಳವರೆಗೆ ಅನೇಕ ಕಷ್ಟಗಳನ್ನು ಸಹಿಸಿಕೊಳ್ಳಬಲ್ಲುದು. ಇದೇ ಮಾತನ್ನು ಸತ್ಪುರುಷರ ವಿಷಯದಲ್ಲಿಯೂ ತಿಳಿಯತಕ್ಕದ್ದು. (ದುರ್ಬಲನಾದವನೂ ಸಾಮೂಹಿಕ ಶಕ್ತಿಯಿಂದಾಗಿ ಬಲಯುತನಾಗಬಲ್ಲ.) ॥ ೫೯ ॥

**ಧೂಮಾಯಂತೇ ವ್ಯಪೇತಾನಿ ಜ್ವಲಂತಿ ಸಹಿತಾನಿ ಚ ।**
**ಧೃತರಾಷ್ಟ್ರೋಲ್ಮುಕಾನೀವ ಜ್ಞಾತಯೋ ಭರತರ್ಷಭ ॥ ೬೦ ॥**

ಧೃತರಾಷ್ಟ್ರಮಹಾರಾಜ ! ಉರಿಯುತ್ತಿರುವ ಕೊಳ್ಳಿಗಳನ್ನು ಪ್ರತ್ಯೇಕಿಸಿಬಿಟ್ಟರೆ ಅವು ಹೊಗೆಯಾಡಲು ಪ್ರಾರಂಭಿಸುತ್ತವೆ. ಪುನಃ ಜೊತೆಗೂಡಿಸಿದರೆ ಭುಗ್ ಎಂದು ಹೊತ್ತಿಕೊಂಡು ಉರಿಯುತ್ತವೆ. ಅದೇ ರೀತಿಯಲ್ಲಿ ಜ್ಞಾತಿಗಳೂ ಸಹ ಪ್ರತ್ಯೇಕ ಪ್ರತ್ಯೇಕವಾಗಿದ್ದರೆ ಶಕ್ತಿಹೀನರಾಗುತ್ತಾರೆ. ಒಂದುಗೂಡಿದರೆ ಮಹಾಶಕ್ತಿಯಿಂದ ಪ್ರಜ್ವಲಿಸುತ್ತಾರೆ. ॥ ೬೦ ॥

**ಬ್ರಾಹ್ಮಣೇಷು ಚ ಯೇ ಶೂರಾಃ ಸ್ತ್ರೀಷು ಜ್ಞಾತಿಷು ಗೋಷು ಚ ।**
**ವೃಂತಾದಿವ ಫಲಂ ಪಕ್ವಂ ಧೃತರಾಷ್ಟ್ರ ಪತಂತಿ ತೇ ॥ ೬೧ ॥**

ಯಾವ ಶೂರರು ಬ್ರಾಹ್ಮಣರ ವಿಷಯದಲ್ಲಿ, ಸ್ತ್ರೀಯರ ವಿಷಯದಲ್ಲಿ, ಜ್ಞಾತಿಗಳ ವಿಷಯದಲ್ಲಿ ಮತ್ತು ಗೋವುಗಳ ವಿಷಯದಲ್ಲಿ ತಮ್ಮ ಶೌರ್ಯವನ್ನು ಪ್ರದರ್ಶಿಸುತ್ತಾರೆಯೋ ಅವರು ಪಕ್ವವಾದ ಹಣ್ಣು ತೊಟ್ಟಿನಿಂದ ಕಳಚಿ ಕೆಳಗೆ ಬೀಳುವಂತೆ – ಅಧೋಗತಿಯನ್ನು ಹೊಂದುತ್ತಾರೆ. ॥ ೬೧ ॥

**ಮಹಾನಪ್ಯೇಕಜೋ ವೃಕ್ಷೋ ಬಲವಾನ್ ಸುಪ್ರತಿಷ್ಠಿತಃ ।**
**ಪ್ರಸಹ್ಯ ಏವ ವಾತೇನ ಸಸ್ಕಂಧೋ ಮರ್ದಿತುಂ ಕ್ಷಣಾತ್ ॥ ೬೨ ॥**

ವೃಕ್ಷವೊಂದು ಬಲುದೊಡ್ಡದಾಗಿಯೂ, ವಿಶಾಲವಾಗಿಯೂ, ಮೂಲದಲ್ಲಿ ದೃಢವಾಗಿಯೂ ಇರಬಹುದು. ಆದರೆ ಅದು ಒಂಟಿಯಾಗಿದ್ದಲ್ಲಿ ಬಿರುಗಾಳಿಯ ಹೊಡೆತಕ್ಕೆ ಸಿಕ್ಕು ಕ್ಷಣದಲ್ಲಿ ಕೊಂಬೆಗಳ ಸಮೇತ ಬಿದ್ದು ಧ್ವಂಸವಾಗುತ್ತದೆ. ॥ ೬೨ ॥

**ಅಥ ಯೇ ಸಹಿತಾ ವೃಕ್ಷಾಃ ಸಂಘಶಃ ಸುಪ್ರತಿಷ್ಠಿತಾಃ ।**
**ತೇ ಹಿ ಶೀಘ್ರತಮಾನ್ ವಾತಾನ್ ಸಹಂತೇಽನ್ಯೋನ್ಯಸಂಶ್ರಯಾತ್ ॥ ೬೩ ॥**

ಹಲವಾರು ವೃಕ್ಷಗಳು ಒಂದೆಡೆಯಲ್ಲಿಯೇ ಗುಂಪಾಗಿದ್ದು ಸುಪ್ರತಿಷ್ಠಿತವಾಗಿದ್ದ ಆ ವೃಕ್ಷಗಳು ಅನ್ಯೋನ್ಯಾಶ್ರಯದಿಂದ ಎಂತಹ ಪ್ರಚಂಡ ಬಿರುಗಾಳಿಯನು ಸಹಿಸಿಕೊಳ್ಳಬಲ್ಲವು. ॥ ೬೩ ॥

**ಏವಂ ಮನುಷ್ಯಮಪ್ಯೇಕಂ ಗುಣೈರಪಿ ಸಮನ್ವಿತಮ್ ।**
**ಶಕ್ಯಂ ದ್ವಿಷಂತೋ ಮನ್ಯಂತೇ ವಾಯುರ್ದ್ರುಮಮಿವೈಕಜಮ್ ॥ ೬೪ ॥**

ಇದೇ ರೀತಿಯಲ್ಲಿ ಸರ್ವಗುಣಸಮನ್ವಿತನಾಗಿದ್ದರೂ ಮಾನವನು ಏಕಾಕಿಯಾಗಿದ್ದ ಪಕ್ಷದಲ್ಲಿ ಸುಪ್ರತಿಷ್ಠವಾದ ಮಹಾವೃಕ್ಷವೊಂದನ್ನು ಬಿರುಗಾಳಿಯು ಉರುಳಿಸಿಬಿಡುವಂತೆ – ಪರಾಜಯಗೊಳಿಸಿಬಿಡಬಹುದೆಂದು ಶತ್ರುಗಳು ಭಾವಿಸುತ್ತಾರೆ. ॥ ೬೪ ॥

**ಅನ್ಯೋನ್ಯಸಮುಪಷ್ಟಂಭಾದನ್ಯೋನ್ಯಾಪಾಶ್ರಯೇಣ ಚ ।**
**ಜ್ಞಾತಯಃ ಸಂಪ್ರವರ್ಧಂತೇ ಸರಸೀವೋತ್ಪಲಾನ್ಯುತ ॥ ೬೫ ॥**

ಪರಸ್ಪರ ಸಹಕಾರದಿಂದ, ಒಬ್ಬರು ಮತ್ತೊಬ್ಬರಿಗೆ ಅಗತ್ಯವಿದ್ದಾಗ ಸಹಕರಿಸಿ ಆಶ್ರಯ ನೀಡುವುದರಿಂದ – ಸರೋವರದಲ್ಲಿರುವ ಅರಳಿದ ಕಮಲಪುಷ್ಪಗಳಂತೆ – ಜ್ಞಾತಿಗಳು ಅಭಿವೃದ್ಧಿ ಹೊಂದುತ್ತಾರೆ. ॥ ೬೫ ॥

**ಅವಧ್ಯಾ ಬ್ರಾಹ್ಮಣಾ ಗಾವೋ ಜ್ಞಾತಯಃ ಶಿಶವಃ ಸ್ತ್ರಿಯಃ ।**
**ಯೇಷಾಂ ಚಾನ್ನಾನಿ ಭುಂಜೀತ ಯೇ ಚ ಸ್ಯುಃ ಶರಣಾಗತಾಃ ॥ ೬೬ ॥**

ಬ್ರಾಹ್ಮಣರು, ಗೋವುಗಳು, ಜ್ಞಾತಿಗಳು, ಮಕ್ಕಳು, ಸ್ತ್ರೀಯರು, ಅನ್ನದಾತರು ಮತ್ತು ಆಶ್ರಯವನ್ನು ಕೋರಿ ಬಂದವರು – ಇವರು ಅವಧ್ಯರು. ॥ ೬೬ ॥

**ನ ಮನುಷ್ಯೇ ಗುಣಃ ಕಶ್ಚಿದ್ ರಾಜನ್ ಸಧನತಾಮೃತೇ ।**
**ಅನಾತುರತ್ವಾದ್ ಭದ್ರಂ ತೇ ಮೃತಕಲ್ಪಾ ಹಿ ರೋಗಿಣಃ ॥ ೬೭ ॥**

ಮಹಾರಾಜ ! ನಿನಗೆ ಮಂಗಳವಾಗಲಿ. ಮನುಷ್ಯನಲ್ಲಿ ಆರೋಗ್ಯ ಮತ್ತು ಧನ – ಈ ಎರಡನ್ನು ಬಿಟ್ಟು ಬೇರೆಯ ಗುಣಗಳೇ ಇಲ್ಲ. ಏಕೆಂದರೆ ರೋಗಿಗಳು ಮೃತಪ್ರಾಯರೇ ಸರಿ. ॥ ೬೭ ॥

**ಅವ್ಯಾಧಿಜಂ ಕಟುಕಂ ಶೀರ್ಷರೋಗಿ**
**ಪಾಪಾನುಬಂಧಂ ಪರುಷಂ ತೀಕ್ಷ್ಣಮುಷ್ಣಮ್ ।**

ಯಾವ ವಿಧವಾದ ರೋಗದಿಂದಲೂ ಹುಟ್ಟದಿರುವುದು, ಕಹಿಯಾದದ್ದು, ತಲೆಗೆ ತೊಂದರೆಯನ್ನುಂಟು ಮಾಡುವಂತಹುದು, ಪಾಪದಿಂದ ಕೂಡಿದುದು, ತೀಕ್ಷ್ಣವಾದುದು ಮತ್ತು ಹೆಚ್ಚು ಬಿಸಿಯಾದುದು ಹಾಗೂ ಸತ್ಪುರುಷರಿಂದ ಮಾತ್ರವೇ ನುಂಗಿಕೊಳ್ಳಲು ಸಾಧ್ಯವಾದುದು, ದುಷ್ಟಾತ್ಮರಿಂದ ನುಂಗಿಕೊಳ್ಳಲು ಸಾಧ್ಯವಾಗದುದು - ಇಂತಹ ಕೋಪವನ್ನು ಸತ್ಪುರುಷರಂತೆ ನೀನೂ ನುಂಗಿಬಿಡು. ಶಾಂತನಾಗು. ॥ ೬೮ ॥

**ರೋಗಾರ್ದಿತಾ ನ ಫಲಾನ್ಯಾದ್ರಿಯಂತೇ**
**ನ ವೈ ಲಭಂತೇ ವಿಷಯೇಷು ತತ್ತ್ವಮ್ ।**
**ದುಃಖೋಪೇತಾ ರೋಗಿಣೋ ನಿತ್ಯಮೇವ**
**ನ ಬುಧ್ಯಂತೇ ಧನಭೋಗಾನ್ನ ಸೌಖ್ಯಮ್ ॥ ೬೯ ॥**

ರೋಗಿಗಳಾದವರು ಮಧುರವಾದ ಹಣ್ಣುಗಳ ವಿಷಯದಲ್ಲಿ ಆಸಕ್ತರಾಗಿರುವುದಿಲ್ಲ, ಪದಾರ್ಥಗಳ ಸಾರವನ್ನು ತಿಳಿಯಲು ಸಮರ್ಥರಾಗುವುದಿಲ್ಲ. ಯಾವಾಗಲೂ ದುಃಖದಲ್ಲೇ ಮುಳುಗಿರುವ ಅವರಿಗೆ ವಿಷಯಸುಖವಾಗಲಿ ಐಶ್ವರ್ಯಾನುಭವವಾಗಲಿ ಬೇಡವಾಗಿರುತ್ತದೆ. ॥ ೬೯ ॥

**ಪುರಾ ಹ್ಯುಕ್ತಂ ನಾಕರೋಸ್ತ್ವಂ ವಚೋ ಮೇ**
**ದ್ಯೂತೇ ಜಿತಾಂ ದ್ರೌಪದೀಂ ಪ್ರೇಕ್ಷ್ಯ ರಾಜನ್ ।**
**ದುರ್ಯೋಧನಂ ವಾರಯೇತ್ಯಕ್ಷವತ್ಯಾಂ**
**ಕಿತವತ್ವಂ ಪಂಡಿತಾ ವರ್ಜಯಂತಿ ॥ ೭೦ ॥**

ಮಹಾರಾಜ ! ಪಗಡೆಯಾಟದಲ್ಲಿ ದ್ರೌಪದಿಯನ್ನು ಸಹ ಗೆದ್ದುದನ್ನು ನೋಡಿ, ಮೋಸದ ಪಗಡೆಯಾಟವನ್ನು ಪಂಡಿತರು ಮಾನ್ಯ ಮಾಡರೆಂದೂ, ದುರ್ಯೋಧನನನ್ನು ಅಕಾರ್ಯದಿಂದ ತಡೆದು ನಿಲ್ಲಿಸೆಂದೂ ನಾನು ನಿನಗೆ ಹೇಳಿದೆನು. ಆದರೆ ನೀನು ನನ್ನ ಮಾತಿನಂತೆ ನಡೆದುಕೊಳ್ಳಲಿಲ್ಲ. ॥ ೭೦ ॥

**ನ ತದ್ ಬಲಂ ಯನ್ಮೃದುನಾ ವಿರುಧ್ಯತೇ**
**ಸೂಕ್ಷ್ಮೋ ಧರ್ಮಸ್ತರಸಾ ಸೇವಿತವ್ಯಃ ।**
**ಪ್ರಧ್ವಂಸಿನೀ ಕ್ರೂರಸಮಾಹಿತಾ ಶ್ರೀ-**
**ರ್ಮೃದುಪ್ರೌಢಾ ಗಚ್ಛತಿ ಪುತ್ರಪೌತ್ರಾನ್ ॥ ೭೧ ॥**

ಮೃದುಸ್ವಭಾವದವರ ಮೇಲೆ ವಿರೋಧ ಕಟ್ಟಿಕೊಳ್ಳುವುದು ಪರಾಕ್ರಮದ್ಯೋತಕವ. ಧರ್ಮವು ಬಹುಸೂಕ್ಷ್ಮವಾದುದು. ಅದನ್ನು ಸರ್ವದಾ ಸೇವಿಸಬೇಕು. ಕ್ರೌರ್ಯದಿಂ ಸಂಪಾದಿಸಿದ ಐಶ್ವರ್ಯವು ಮೃತ್ಯುಪ್ರಾಯವಾಗುತ್ತದೆ. ಮೃದುತ್ವದಿಂದ ಸನ್ಮಾರ್ಗದಿಂ ಸಂಪಾದಿಸಿದ ಐಶ್ವರ್ಯವು ದಿನ ದಿನಕ್ಕೂ ವೃದ್ಧಿ ಹೊಂದಿ, ಪುತ್ರ-ಪೌತ್ರರ ಕಾಲದವರೆಗ ವ್ಯಾಪಿಸಿರುತ್ತದೆ. ॥ ೭೧ ॥

**ಧಾರ್ತರಾಷ್ಟ್ರಾಃ ಪಾಂಡವಾನ್ ಪಾಲಯಂತು**
**ಪಾಂಡೋಃ ಸುತಾಸ್ತವ ಪುತ್ರಾಂಶ್ಚ ಪಾಂತು ।**
**ಏಕಾರಿಮಿತ್ರಾಃ ಕುರವೋ ಹ್ಯೇಕಕಾರ್ಯಾ**
**ಜೀವಂತು ರಾಜನ್ ಸುಖಿನಃ ಸಮೃದ್ಧಾಃ ॥ ೭೨ ॥**

ಮಹಾರಾಜ ! ನಿನ್ನ ಮಕ್ಕಳು ಪಾಂಡವರನ್ನು ಕಾಪಾಡಲಿ ಹಾಗೂ ಪಾಂಡವರ ನಿನ್ನ ಮಕ್ಕಳನ್ನು ಸಂರಕ್ಷಿಸಲಿ. ಪಾಂಡವ-ಕೌರವರೆಲ್ಲರೂ ಒಂದಾಗಿ ಒಬ್ಬರ ಮಿತ್ರರನ ಎಲ್ಲರೂ ಮಿತ್ರನೆಂದೂ, ಒಬ್ಬರ ಶತ್ರುವನ್ನು ಎಲ್ಲರೂ ಶತ್ರುವೆಂದೂ ತಿಳಿಯಲಿ. ಎಲ್ಲರು ಒಂದೇ ಕಾರ್ಯದಲ್ಲಿ ತೊಡಗಿಕೊಂಡು ಸುಖಿಗಳಾಗಿ ಸಂಪತ್ಸಮೃದ್ಧರಾಗಿ ಚಿರಕಾಲದವರೆ ಜೀವಿಸಲಿ. ॥ ೭೨ ॥

**ಮೇಢೀಭೂತಃ ಕೌರವಾಣಾಂ ತ್ವಮದ್ಯ**
**ತ್ವಯ್ಯಾಧೀನಂ ಕುರುಕುಲಮಾಜಮೀಢ ।**
**ಪಾರ್ಥಾನ್ ಬಾಲಾನ್ ವನವಾಸಪ್ರತಪ್ತಾನ್**
**ಗೋಪಾಯಸ್ವ ಸ್ವಂ ಯಶಸ್ತಾತ ರಕ್ಷನ್ ॥ ೭೩ ॥**

ಕುರುಕುಲಕ್ಕೆ ನೀನೇ ಇಂದು ಆಧಾರಸ್ತಂಭದಂತಿರುವೆ. ಇಂದು ಕುರುಕುಲವು ನಿನ್ನ ಅಧೀನದಲ್ಲಿದೆ. ಅಜಮೀಢವಂಶದರಸನೇ! ನಿನ್ನ ಯಶಸ್ಸನ್ನು ಸಂರಕ್ಷಿಸಿಕೊಳ್ಳುವುದಕ್ಕಾಗಿ ಬಾಲರಾಗಿರುವ, ವನವಾಸದಿಂದ ಬಳಲಿ ಬೆಂಡಾಗಿರುವ ಪಾಂಡವರನ್ನು ಸಂರಕ್ಷಿಸು. ॥ ೭೩ ॥

**ಸಂಧತ್ಸ್ವ ತ್ವಂ ಕೌರವ ಪಾಂಡುಪುತ್ರೈ-**
**ರ್ಮಾ ತೇಽಂತರಂ ರಿಪವಃ ಪ್ರಾರ್ಥಯಂತು ।**
**ಸತ್ಯೇ ಸ್ಥಿತಾಸ್ತೇ ನರದೇವ ಸರ್ವೇ**

ಕುರುರಾಜ ! ಪಾಂಡವರೊಡನೆ ಸಂಧಿಯನ್ನು ಏರ್ಪಡಿಸು. ಶತ್ರುಗಳು ಕೌರವ-ಪಾಂಡವರ ವೈಮನಸ್ಯವನ್ನು ಪ್ರಾರ್ಥಿಸದಿರಲಿ. ನರದೇವ ! ಪಾಂಡವರು ಸತ್ಯನಿಷ್ಠರಾಗಿದ್ದಾರೆ. ಯುದ್ಧದ ಸಿದ್ಧತೆಯನ್ನು ಆತುರದಿಂದ ಮಾಡಿಕೊಳ್ಳುತ್ತಿರುವ ದುರ್ಯೋಧನನನ್ನು ತಡೆಯುವವನಾಗು. ॥ ೭೪ ॥

ಇತಿ ಶ್ರೀಮಹಾಭಾರತೇ ಉದ್ಯೋಗಪರ್ವಣಿ ಪ್ರಜಾಗರಪರ್ವಣಿ
ವಿದುರಹಿತವಾಕ್ಯೇ ಷಟ್ತ್ರಿಂಶೋऽಧ್ಯಾಯಃ ॥ ೩೬ ॥



# ಐದನೇ ಅಧ್ಯಾಯ

ವಿದುರ ಉವಾಚ

ಸಪ್ತದಶೇಮಾನ್ ರಾಜೇಂದ್ರ ಮನುಃ ಸ್ವಾಯಂಭುವೋಽಬ್ರವೀತ್ ।
ವೈಚಿತ್ರವೀರ್ಯ ಪುರುಷಾನಾಕಾಶಂ ಮುಷ್ಟಿಭಿರ್ಘ್ನತಃ ॥ ೧ ॥

ದಾನವೇಂದ್ರಸ್ಯ ಚ ಧನುರನಾಮ್ಯಂ ನಮತೋಽಬ್ರವೀತ್ ।
ಅಥೋ ಮರೀಚಿನಃ ಪಾದಾನಗ್ರಾಹ್ಯಾನ್ ಗೃಹ್ಣತಸ್ತಥಾ ॥ ೨ ॥

ಯಶ್ಚಾಶಿಷ್ಯಂ ಶಾಸ್ತಿ ವೈ ಯಶ್ಚ ತುಷ್ಯೇದ್
ಯಶ್ಚಾತಿವೇಲಂ ಭಜತೇ ದ್ವಿಷಂತಮ್ ।
ಸ್ತ್ರಿಯಶ್ಚ ಯೋ ರಕ್ಷತಿ ಭದ್ರಮಶ್ನುತೇ
ಯಶ್ಚಾಯಾಚ್ಯಂ ಯಾಚತೇ ಕತ್ಥತೇ ಚ ॥ ೩ ॥

ಯಶ್ಚಾಭಿಜಾತಃ ಪ್ರಕರೋತ್ಯಕಾರ್ಯಂ
ಯಶ್ಚಾಬಲೋ ಬಲಿನಾ ನಿತ್ಯವೈರೀ ।
ಅಶ್ರದ್ದಧಾನಾಯ ಚ ಯೋ ಬ್ರವೀತಿ
ಯಶ್ಚಾಕಾಮ್ಯಂ ಕಾಮಯತೇ ನರೇಂದ್ರ ॥ ೪ ॥

ವಧ್ವಾವಹಾಸಂ ಶ್ವಶುರೋ ಮನ್ಯತೇ ಯೋ
ವಧ್ವಾ ವಸನ್ನಭಯೋ ಮಾನಕಾಮಃ ।
ಪರಕ್ಷೇತ್ರೇ ನಿರ್ವಪತಿ ಸ್ವಬೀಜಂ
ಸ್ತ್ರಿಯಂ ಚ ಯಃ ಪರಿವದತೇಽತಿವೇಲಮ್ ॥ ೫ ॥

ಯಶ್ಚಾಪಿ ಲಬ್ಧ್ವಾ ನ ಸ್ಮರಾಮೀತಿ ವಾದೀ
ದತ್ತ್ವಾ ಚ ಯಃ ಕತ್ಥತಿ ಯಾಚ್ಯಮಾನಃ ।
ಯಶ್ಚಾಸತಃ ಸತ್ತ್ವಮುಪಾನಯೀತ
ಏತಾನ್ ನಯಂತಿ ನಿರಯಂ ಪಾಶಹಸ್ತಾಃ ॥ ೬ ॥

ವಿದುರನು ಹೇಳುತ್ತಾನೆ : ರಾಜೇಂದ್ರ ! ವಿಚಿತ್ರವೀರ್ಯನಂದನ ! ಸ್ವಾಯಂಭುವ ಮನುವು ತಿಳಿಸುತ್ತಾನೆ – ಈ ಕೆಳಗೆ ನಿರೂಪಿಸಿರುವ ಹದಿನೇಳು ವಿಧದ ಮೂರ್ಖರನ್ನು ಪಾಶಹಸ್ತರಾದ ಯಮಭಟರು ನರಕಕ್ಕೆ ಒಯ್ಯುತ್ತಾರೆ – ಆಕಾಶವನ್ನು ಮುಷ್ಟಿಗಳಿಂದ ಪ್ರಹರಿಸಲೆಳೆಸುವವ, ಇಂದ್ರನ ಬಗಿಸಲಸಾಧ್ಯವಾದ ಧನುಸ್ಸನ್ನು (ಕಾಮನಬಿಲ್ಲನ್ನು)

ಪ್ರಯತ್ನಿಸುವವ, ಅವಿಧೇಯನನ್ನು ಹತೋಟಿಯಲ್ಲಿಡಲೆತ್ನಿಸುವವ, ಮರ್ಯಾದೆಯನ್ನು ಉಲ್ಲಂಘಿಸಿಯೂ ಸಂತೋಷವಾಗಿರುವವ, ಶತ್ರುವಿನ ಸೇವೆ ಮಾಡುವವ, ರಕ್ಷಿಸಲು ಯೋಗ್ಯವಲ್ಲದ ಸ್ತ್ರೀಯನ್ನು ರಕ್ಷಿಸಲು ಪ್ರಯತ್ನಿಸುವವ ಹಾಗೂ ಅವಳಿಂದ ಸ್ವಕಲ್ಯಾಣವನ್ನು ಅಪೇಕ್ಷಿಸುವವ, ಯಾಚಿಸಲು ಅಯೋಗ್ಯವಾದುದನ್ನು ಯಾಚಿಸುವವ ಹಾಗೂ ಆತ್ಮಪ್ರಶಂಸೆ ಮಾಡಿಕೊಳ್ಳುವವ, ಒಳ್ಳೆಯ ಕುಲದಲ್ಲಿ ಹುಟ್ಟಿಯೂ ನೀಚಕಾರ್ಯದಲ್ಲಿ ತೊಡಗಿದವ, ಸ್ವತಃ ದುರ್ಬಲನಾಗಿದ್ದೂ ಬಲಶಾಲಿಯೊಂದಿಗೆ ವೈರವನ್ನು ಹೊಂದಿದವ, ಶ್ರದ್ಧಾಹೀನನಿಗೆ ಉಪದೇಶಿಸುವವ, ಶಾಸ್ತ್ರನಿಷಿದ್ಧವಾದ ವಸ್ತುವನ್ನು ಬಯಸುವವ, ಸೊಸೆಯೊಡನೆ ಪರಿಹಾಸ್ಯವನ್ನು ಮಾಡಿಕೊಂಡಿರುವುದು ಅನುಚಿತವಲ್ಲವೆಂದು ಭಾವಿಸುವ ಮಾವ, ಸೊಸೆಯೊಡನೆ ಏಕಾಂತದಲ್ಲಿದ್ದುಕೊಂಡೂ ಸ್ವಲ್ಪವೂ ಭಯಪಡದೇ ಸಮಾಜದಲ್ಲಿ ಮರ್ಯಾದಸ್ಥನೆಂದು ಕರೆಸಿಕೊಳ್ಳಲು ಬಯಸುವವ, ಪರಸ್ತ್ರೀಸಂಗವನ್ನು ಮಾಡುವವ, ಅವಶ್ಯಕತೆಗಿಂತ ಹೆಚ್ಚಾಗಿ ಹೆಂಗಸರನ್ನು ನಿಂದಿಸುವವ, ಬೇರೆಯವರಿಂದ ವಸ್ತುವನ್ನು ಪಡೆದು 'ನೆನಪಿಲ್ಲ' ಎಂದು ಅಪಲಾಪಿಸುವವ, ದಾನ ಮಾಡಲು ಬಯಸಿ ಅದನ್ನು ಸ್ವೀಕರಿಸಲು ಬಂದವನ ಮುಂದೆ ಆತ್ಮಶ್ಲಾಘನೆ ಮಾಡಿಕೊಳ್ಳುವವ ಹಾಗೂ ಸುಳ್ಳನ್ನು ಸತ್ಯವೆಂದು ಸಮರ್ಥಿಸಲು ಪ್ರಯತ್ನಿಸುವವ. ॥ ೧ - ೬ ॥

**ಯಸ್ಮಿನ್ ಯಥಾ ವರ್ತತೇ ಯೋ ಮನುಷ್ಯ-**
**ಸ್ತಸ್ಮಿಂಸ್ತಥಾ ವರ್ತಿತವ್ಯಂ ಸ ಧರ್ಮಃ।**
**ಮಾಯಾಚಾರೋ ಮಾಯಯಾ ವರ್ತಿತವ್ಯಃ**
**ಸಾಧ್ವಾಚಾರಃ ಸಾಧುನಾ ಪ್ರತ್ಯುಪೇಯಃ ॥ ೭ ॥**

ಒಬ್ಬ ಮನುಷ್ಯನು ಮತ್ತೊಬ್ಬನ ವಿಷಯದಲ್ಲಿ ಯಾವ ರೀತಿಯಲ್ಲಿ ನಡೆದುಕೊಳ್ಳುತ್ತಾನೆಯೋ ಅದೇ ರೀತಿಯಲ್ಲಿ ಅವನ ವಿಷಯದಲ್ಲಿ ನಾವೂ ನಡೆದುಕೊಳ್ಳಬೇಕು. ಕಪಟತನದಿಂದ ನಡೆದುಕೊಳ್ಳುವವನೊಂದಿಗೆ ಅದೇ ರೀತಿಯಲ್ಲಿಯೂ ಸಾತ್ತ್ವಿಕವಾಗಿ ನಡೆದುಕೊಳ್ಳುವವರೊಂದಿಗೆ ಸಾತ್ತ್ವಿಕತೆಯಿಂದಲೂ ನಡೆದುಕೊಳ್ಳಬೇಕು. ॥ ೭ ॥

**ಜರಾ ರೂಪಂ ಹರತಿ ಧೈರ್ಯಮಾಶಾ**
**ಮೃತ್ಯುಃ ಪ್ರಾಣಾನ್ ಧರ್ಮಚರ್ಯಾಮಸೂಯಾ ।**
**ಕಾಮೋ ಹ್ರಿಯಂ ವೃತ್ತಮನಾರ್ಯಸೇವಾ**
**ಕ್ರೋಧಃ ಶ್ರಿಯಂ ಸರ್ವಮೇವಾಭಿಮಾನಃ ॥ ೮ ॥**

ಮುಪ್ಪು ರೂಪವನ್ನು ಅಪಹರಿಸುತ್ತದೆ. ಆಶೆಯು ಧೈರ್ಯವನ್ನೂ, ಮೃತ್ಯುವು ಪ್ರಾಣಗಳನ್ನೂ, ಅಸೂಯೆಯು ಧರ್ಮಾಚರಣೆಯನ್ನೂ, ಕಾಮವು ಲಜ್ಜೆಯನ್ನೂ, ನೀಚಪುರುಷರ ಸೇವೆಯು ಮನುಷ್ಯನ ಚಾರಿತ್ರ್ಯವನ್ನೂ, ಕೋಪವು ಸಂಪತ್ತನ್ನೂ ವಿನಾಶಗೊಳಿಸುತ್ತವೆ. ದುರಭಿಮಾನ ಅಥವಾ ದುರಹಂಕಾರವು ಮಾನವನ ಸರ್ವಸ್ವವನ್ನೂ ವಿನಾಶಗೊಳಿಸುತ್ತದೆ. ॥ ೮ ॥

### ಧೃತರಾಷ್ಟ್ರ ಉವಾಚ

**ಶತಾಯುರುಕ್ತಃ ಪುರುಷಃ ಸರ್ವವೇದೇಷು ವೈ ಯದಾ ।**
**ನಾಪ್ನೋತ್ಯಥ ಚ ತತ್ ಸರ್ವಮಾಯುಃ ಕೇನೇಹ ಹೇತುನಾ ॥ ೯ ॥**

**ಧೃತರಾಷ್ಟ್ರನು ಹೇಳಿದನು** - ''ವಿದುರ ! ಎಲ್ಲ ವೇದಗಳಲ್ಲಿಯೂ ಮನುಷ್ಯನ ಆಯಸ್ಸು ನೂರು ವರ್ಷಗಳೆಂದು ಹೇಳಲ್ಪಟ್ಟಿದ್ದರೂ ಸಹ ಮಾನವನು ಆ ಪೂರ್ಣಾಯುಷ್ಯವನ್ನು ಪಡೆಯದಿರಲು ಕಾರಣವೇನು ?'' ॥ ೯ ॥

### ವಿದುರ ಉವಾಚ

**ಅತಿಮಾನೋಽತಿವಾದಶ್ಚ ತಥಾತ್ಯಾಗೋ ನರಾಧಿಪ ।**
**ಕ್ರೋಧಶ್ಚಾತ್ಮವಿಧಿತ್ಸಾ ಚ ಮಿತ್ರದ್ರೋಹಶ್ಚ ತಾನಿ ಷಟ್ ॥ ೧೦ ॥**
**ಏತ ಏವಾಸಯಸ್ತೀಕ್ಷ್ಣಾಃ ಕೃಂತಂತ್ಯಾಯೂಂಷಿ ದೇಹಿನಾಮ್ ।**
**ಏತಾನಿ ಮಾನವಾನ್ ಘ್ನಂತಿ ನ ಮೃತ್ಯುರ್ಭದ್ರಮಸ್ತು ತೇ ॥ ೧೧ ॥**

**ವಿದುರನು ಹೇಳಿದನು** - ರಾಜನೇ ! ನಿನಗೆ ಕಲ್ಯಾಣವಾಗಲಿ. ಅತಿಯಾದ ಅಭಿಮಾನ, ಅತಿ ಮಾತು, ತ್ಯಾಗಬುದ್ಧಿಯಿಲ್ಲದಿರುವುದು, ಅತಿಯಾದ ಕೋಪ, ಮಿತಿಮೀರಿದ ಸ್ವಾರ್ಥತೆ ಹಾಗೂ ಮಿತ್ರದ್ರೋಹ - ಈ ಆರು ತೀಕ್ಷ್ಣವಾದ ಕತ್ತಿಗಳು ದೇಹಧಾರಿಯಾದ ಮನುಷ್ಯನ ಆಯುಸ್ಸನ್ನು ಕಡಿಮೆಗೊಳಿಸುತ್ತವೆ. ಇವೇ ಮನುಷ್ಯನನ್ನು ಕೊಲ್ಲುತ್ತವೆಯೇ ಹೊರತು ಮೃತ್ಯುವಲ್ಲ. ॥ ೧೦, ೧೧ ॥

**ವಿಶ್ವಸ್ತಸ್ಯೈತಿ ಯೋ ದಾರಾನ್ ಯಶ್ಚಾಪಿ ಗುರುತಲ್ಪಗಃ ।**
**ವೃಷಲೀಪತಿರ್ದ್ವಿಜೋ ಯಶ್ಚ ಪಾನಪಶ್ಚೈವ ಭಾರತ ॥ ೧೨ ॥**
**ಆದೇಶಕೃದ್ ವೃತ್ತಿಹಂತಾ ದ್ವಿಜಾನಾಂ ಪ್ರೇಷಕಶ್ಚ ಯಃ ।**
**ಶರಣಾಗತಹಾ ಚೈವ ಸರ್ವೇ ಬ್ರಹ್ಮಹಣಃ ಸಮಾಃ ।**

ಭಾರತ ! ತನ್ನಲ್ಲಿ ಪೂರ್ಣವಿಶ್ವಾಸವನ್ನಿಟ್ಟಿರುವವನ ಪತ್ನಿಯ ಸಮಾಗಮ ಮಾಡುವವನು, ಗುರುಪತ್ನಿಯ ಸಮಾಗಮ ಮಾಡುವವನು, ಬ್ರಾಹ್ಮಣನಾಗಿದ್ದೂ ಶೂದ್ರಸ್ತ್ರೀಯೊಂದಿಗೆ ಸಂಬಂಧವಿಟ್ಟುಕೊಂಡಿರುವವನು, ಹೆಂಡ ಕುಡಿಯುವವನು, ದೊಡ್ಡವರಿಗೆ ಆದೇಶ ನೀಡುವವನು, ಇನ್ನೊಬ್ಬರ ಜೀವಿಕೆಯನ್ನು ನಷ್ಟಗೊಳಿಸುವವನು, ಬ್ರಾಹ್ಮಣರನ್ನು ಸೇವಾಕಾರ್ಯಕ್ಕಾಗಿ ಅಲ್ಲಿಲ್ಲಿಗೆ ಕಳುಹಿಸುವವನು ಹಾಗೂ ಶರಣಾಗತನನ್ನು ಹಿಂಸಿಸುವವನು - ಇವರೆಲ್ಲರೂ ಬ್ರಹ್ಮಹತ್ಯೆಯನ್ನು ಮಾಡಿದವನಿಗೆ ಸಮಾನರೆನಿಸುತ್ತಾರೆ. ಇಂತಹವರ ಸಂಪರ್ಕಮಾಡಿದವನು ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕೆಂದು ವೇದಗಳು ಸಾರುತ್ತವೆ. ॥ ೧೨ - ೧೩ ॥

**ಗೃಹೀತವಾಕ್ಯೋ ನಯವಿದ್ ವದಾನ್ಯಃ**
**ಶೇಷಾನ್ನಭೋಕ್ತಾ ಹ್ಯವಿಹಿಂಸಕಶ್ಚ ।**
**ನಾನರ್ಥಕೃತ್ಯಾಕುಲಿತಃ ಕೃತಜ್ಞಃ**
**ಸತ್ಯೋ ಮೃದುಃ ಸ್ವರ್ಗಮುಪೈತಿ ವಿದ್ವಾನ್ ॥ ೧೪ ॥**

ಹಿರಿಯರ ಮಾತನ್ನು ಕೇಳುವವನೂ, ನೀತಿಜ್ಞನೂ, ಉದಾರಿಯೂ, ಯಜ್ಞಶೇಷವಾದ ಅನ್ನವನ್ನು ಊಟಮಾಡುವವನೂ, ಹಿಂಸಾರಹಿತನೂ, ಅನರ್ಥಕರವಾದ ಕಾರ್ಯಗಳಿಂದ ದೂರವಿರುವವನೂ, ಕೃತಜ್ಞನೂ, ಸತ್ಯವಾದಿಯೂ ಹಾಗೂ ಕೋಮಲ ಸ್ವಭಾವವುಳ್ಳವನೂ ಆದ ವಿದ್ವಾಂಸನು ಸ್ವರ್ಗಕ್ಕೆ ಹೋಗುತ್ತಾನೆ. ॥ ೧೪ ॥

**ಸುಲಭಾಃ ಪುರುಷಾ ರಾಜನ್ ಸತತಂ ಪ್ರಿಯವಾದಿನಃ ।**
**ಅಪ್ರಿಯಸ್ಯ ತು ಪಥ್ಯಸ್ಯ ವಕ್ತಾ ಶ್ರೋತಾ ಚ ದುರ್ಲಭಃ ॥ ೧೫ ॥**

ರಾಜನೇ ! ಸರ್ವದಾ ಪ್ರಿಯಕರವಾದ ಮಾತುಗಳನ್ನೇ ಆಡುವವರು ಸಮಾಜದಲ್ಲಿ ಸಹಜವಾಗಿಯೇ ಕಾಣಸಿಗುತ್ತಿರುತ್ತಾರೆ. ಆದರೆ ಕೇಳಲು ಅಪ್ರಿಯವಾಗಿದ್ದರೂ ಸಹ ಪಥ್ಯವಾದುದನ್ನು (ಹಿತವಾದುದನ್ನು) ಹೇಳುವವರೂ ಕೇಳುವವರೂ ಅತ್ಯಂತ ವಿರಳ. ॥ ೧೫ ॥

**ಯೋ ಹಿ ಧರ್ಮಂ ಸಮಾಶ್ರಿತ್ಯ ಹಿತ್ವಾ ಭರ್ತುಃ ಪ್ರಿಯಾಪ್ರಿಯೇ ।**
**ಅಪ್ರಿಯಾಣ್ಯಾಹ ಪಥ್ಯಾನಿ ತೇನ ರಾಜಾ ಸಹಾಯವಾನ್ ॥ ೧೬ ॥**

ಯಾವನು ಧರ್ಮವನ್ನೇ ಆಶ್ರಯಿಸಿದ್ದು - ತನ್ನ ಸ್ವಾಮಿಗೆ ತಾನು ಹೇಳುವುದು

ಪ್ರಿಯವಾಗುವುದೇ ಅಥವಾ ಅಪ್ರಿಯವಾಗುವುದೇ ಎಂಬುದನ್ನು ಪರಿಗಣಿಸ ಹಿತವಾದುದನ್ನೇ ಹೇಳುತ್ತಾನೆಯೋ ಅಂತಹವನಿಂದಲೇ ರಾಜನಿಗೆ ಒಳ್ಳೆಯ ಸಹಾಂ ಉಂಟಾಗುತ್ತದೆ. ॥ ೧೬ ॥

**ತ್ಯಜೇತ್ ಕುಲಾರ್ಥೇ ಪುರುಷಂ ಗ್ರಾಮಸ್ಯಾರ್ಥೇ ಕುಲಂ ತ್ಯಜೇತ್ ।**
**ಗ್ರಾಮಂ ಜನಪದಸ್ಯಾರ್ಥೇ ಆತ್ಮಾರ್ಥೇ ಪೃಥಿವೀಂ ತ್ಯಜೇತ್ ॥ ೧೭ ॥**

ಕುಲದ ರಕ್ಷಣೆಗಾಗಿ ಒಬ್ಬ ಮನುಷ್ಯನ, ಗ್ರಾಮದ ರಕ್ಷಣೆಗಾಗಿ ಒಂದು ಕುಲದ ದೇಶರಕ್ಷಣೆಗಾಗಿ ಒಂದು ಹಳ್ಳಿಯ ಹಾಗೂ ಆತ್ಮೋದ್ಧಾರಕ್ಕಾಗಿ ಪೃಥ್ವಿಯನ್ನೂ ಸ ಪರಿತ್ಯಜಿಸಬೇಕಾಗುತ್ತದೆ. ॥ ೧೭ ॥

**ಆಪದರ್ಥೇ ಧನಂ ರಕ್ಷೇದ್ ದಾರಾನ್ ರಕ್ಷೇದ್ ಧನೈರಪಿ ।**
**ಆತ್ಮಾನಂ ಸತತಂ ರಕ್ಷೇದ್ ದಾರೈರಪಿ ಧನೈರಪಿ ॥ ೧೮ ॥**

ಆಪತ್ತಿಗಾಗಿ ಧನವನ್ನು ಕೂಡಿಡಬೇಕು. ಹಣದಿಂದಲಾದರೂ ಹೆಂಡತಿಯನ್ನು ರಕ್ಷಿಸಬೇಕು. ಇವೆರಡಕ್ಕಿಂತಲೂ ಹೆಚ್ಚಾಗಿ ತನ್ನನ್ನು ತಾನು ರಕ್ಷಿಸಿಕೊಳ್ಳಬೇಕು. (ಆತ್ಮೋದ್ಧಾರ ಮಾಡಿಕೊಳ್ಳಬೇಕು). ॥ ೧೮ ॥

**ದ್ಯೂತಮೇತತ್ ಪುರಾಕಲ್ಪೇ ದೃಷ್ಟಂ ವೈರಕರಂ ನೃಣಾಮ್ ।**
**ತಸ್ಮಾದ್ ದ್ಯೂತಂ ನ ಸೇವೇತ ಹಾಸ್ಯಾರ್ಥಮಪಿ ಬುದ್ಧಿಮಾನ್ ॥ ೧೯ ॥**

ಹಿಂದಿನ ಕಾಲದಲ್ಲಿ ಜೂಜೆಂಬುದು ಮಾನವರಲ್ಲಿ ಪರಸ್ಪರ ವೈರಕ್ಕೆ ಕಾರಣವಾಯಿತೆಂದು ಕಂಡುಬಂದಿದೆ. ಹಾಗಾಗಿ ಬುದ್ಧಿವಂತನಾದವನು ಕೇವಲ ವಿನೋದಕ್ಕಾಗಿಯೂ ಜೂಜಾಡಬಾರದು. ॥ ೧೯ ॥

**ಉಕ್ತಂ ಮಯಾ ದ್ಯೂತಕಾಲೇಽಪಿ ರಾಜನ್**
**ನೇದಂ ಯುಕ್ತಂ ವಚನಂ ಪ್ರಾತಿಪೇಯ ।**
**ತದೌಷಧಂ ಪಥ್ಯಮಿವಾತುರಸ್ಯ**
**ನ ರೋಚತೇ ತವ ವೈಚಿತ್ರವೀರ್ಯ ॥ ೨೦ ॥**

ಪ್ರತೀಪನಂದನ ! ವಿಚಿತ್ರವೀರ್ಯಕುಮಾರ ! ರಾಜನೇ ! ದ್ಯೂತವು ಪ್ರಾರಂಭವಾದಾಗಲೇ ಹೇಳಿದ್ದೆ - 'ಇದು ಯೋಗ್ಯವಲ್ಲ' ಎಂದು. ಆದರೆ ರೋಗಿಯಾದವನಿಗೆ ಔಷಧವಾಗಲೀ ಪಥ್ಯವಾಗಲೀ ರುಚಿಸದಿರುವಂತೆ ಆಗಿನ ನನ್ನ

ಕಾಕೈರಿಮಾಂಶ್ಚಿತ್ರಬರ್ಹಾನ್ ಮಯೂರಾನ್
ಪರಾಜಯೇಥಾಃ ಪಾಂಡವಾನ್ ಧಾರ್ತರಾಷ್ಟ್ರೈಃ ।
ಹಿತ್ವಾ ಸಿಂಹಾನ್ ಕ್ರೋಷ್ಟುಕಾನ್ ಗೂಹಮಾನಃ
ಪ್ರಾಪ್ತೇ ಕಾಲೇ ಶೋಚಿತಾ ತ್ವಂ ನರೇಂದ್ರ ॥ ೨೦ ॥

ನೀನಿಂದು ಕಾಕಸ್ವರೂಪರಾದ ನಿನ್ನ ಮಕ್ಕಳ ಮೂಲಕ ಚಿತ್ರ-ವಿಚಿತ್ರವಾದ ರೆಕ್ಕೆಗಳುಳ್ಳ ನವಿಲುಗಳಿಗೆ ಸದೃಶರಾಗಿರುವ ಪಾಂಡವರನ್ನು ಪರಾಜಯಗೊಳಿಸಲು ಪ್ರಯತ್ನಿಸುತ್ತಿರುವೆ. ಸಿಂಹಗಳನ್ನು ಬಿಟ್ಟು ಗುಳ್ಳೇನರಿಗಳನ್ನು ಸಂರಕ್ಷಿಸುತ್ತಿರುವೆ. ಮುಂದೆ ಕಾಲವೊದಗಿದಾಗ ನೀನು ಖಂಡಿತವಾಗಿಯೂ ಇದಕ್ಕಾಗಿ ಪಶ್ಚಾತ್ತಾಪ ಪಡಬೇಕಾಗಿ ಬರುತ್ತದೆ. ॥ ೨೦ ॥

ಯಸ್ಮಾತ್ತ ನ ಕ್ರುಧ್ಯತಿ ಸರ್ವಕಾಲಂ
ಭೃತ್ಯಸ್ಯ ಭಕ್ತಸ್ಯ ಹಿತೇ ರತಸ್ಯ ।
ತಸ್ಮಿನ್ ಭೃತ್ಯಾ ಭರ್ತರಿ ವಿಶ್ವಸಂತಿ
ನ ಚೈನಮಾಪತ್ಸು ಪರಿತ್ಯಜಂತಿ ॥ ೨೧ ॥

ರಾಜನೇ ! ಯಾವ ಸ್ವಾಮಿಯು ತನಗೆ ವಿಧೇಯರಾಗಿರುವ ಸೇವಕರ, ಭಕ್ತರ ಹಿತಚಿಂತನೆಯಲ್ಲಿಯೇ ನಿರತನಾಗಿದ್ದು ಯಾವ ಕಾಲದಲ್ಲಿಯೂ ಅವರ ಬಗ್ಗೆ ಕೋಪಿಸಿಕೊಳ್ಳುವುದಿಲ್ಲವೋ - ಅಂತಹ ಸ್ವಾಮಿಯ ವಿಷಯದಲ್ಲಿ ಸೇವಕರು ಸಂಪೂರ್ಣ ವಿಶ್ವಾಸವನ್ನಿಟ್ಟಿರುತ್ತಾರೆ ಹಾಗೂ ಎಂತಹ ಆಪತ್ಕಾಲದಲ್ಲಿಯೂ ಯಜಮಾನನನ್ನು ಪರಿತ್ಯಜಿಸುವುದಿಲ್ಲ. ॥ ೨೧ ॥

ನ ಭೃತ್ಯಾನಾಂ ವೃತ್ತಿಸಂರೋಧನೇನ
ರಾಜ್ಯಂ ಧನಂ ಸಂಜಿಘೃಕ್ಷೇದಪೂರ್ವಮ್ ।
ತ್ಯಜಂತಿ ಹ್ಯೇನಂ ವಂಚಿತಾ ವೈ ವಿರುದ್ಧಾಃ
ಸ್ನಿಗ್ಧಾ ಹ್ಯಮಾತ್ಯಾಃ ಪರಿಹೀನಭೋಗಾಃ ॥ ೨೨ ॥

ಸೇವಕರನ್ನು ಕೆಲಸದಿಂದ ತೆಗೆದುಹಾಕಿ ಅಥವಾ ಅವರ ಆಸ್ತಿಪಾಸ್ತಿಗಳನ್ನು ಮುಟ್ಟುಗೋಲುಹಾಕಿಕೊಂಡು ಯಾವೊಬ್ಬನೂ ಸಹ ಧನವನ್ನಾಗಲೀ ರಾಜ್ಯವನ್ನಾಗಲೀ ಹೆಚ್ಚಿಸಿಕೊಳ್ಳಲು ಪ್ರಯತ್ನಿಸಬಾರದು. ಸ್ನೇಹದಿಂದಿರುವ ಅಮಾತ್ಯರೂ ಸಹ ಹೀಗೆ ಮಾಡುವ ರಾಜನಿಂದ ವಂಚಿತರಾಗಿ, ಸುಖೋಪಭೋಗಗಳಿಂದ ಹೀನರಾಗುವ ಕಾರಣದಿಂದ - ವಿರುದ್ಧವಾಗಿ (ಶತ್ರುಗಳಾಗಿ ಪರಿವರ್ತನೆ ಹೊಂದಿ) ಆ ರಾಜ್ಯವನ್ನೇ ಪರಿತ್ಯಜಿಸಿ ಹೊರಟುಹೋಗುತ್ತಾರೆ. ॥ ೨೨ ॥

**ಕೃತ್ಯಾನಿ ಪೂರ್ವಂ ಪರಿಸಂಖ್ಯಾಯ ಸರ್ವಾ-**
**ಣ್ಯಾಯವ್ಯಯೇ ಚಾನುರೂಪಾಂ ಚ ವೃತ್ತಿಮ್ ।**
**ಸಂಗೃಹ್ಣೀಯಾದನುರೂಪಾನ್ ಸಹಾಯಾನ್**
**ಸಹಾಯಸಾಧ್ಯಾನಿ ಹಿ ದುಷ್ಕರಾಣಿ ॥ ೨೪ ॥**

ರಾಜನಾದವನು ಮೊದಲು ಮಾಡಬೇಕಾದ ಕಾರ್ಯ, ಅದಕ್ಕಾಗುವ ಆಯ-ವ್ಯಯ ಹಾಗೂ ಆ ಕಾರ್ಯಕ್ಕೆ ಸೂಕ್ತವಾದ ಮಾಸಾಶನವನ್ನು ನಿಶ್ಚಯಿಸಿ ಅನಂತರ ಅದಕ್ಕೆ ಸಮರ್ಥರಾದ ಹಾಗೂ ಅನುರೂಪರಾದ ಕಾರ್ಯಸಹಾಯಕರನ್ನು ನಿಯಮಿಸಿಕೊಳ್ಳಬೇಕು. ಎಂತಹ ದುಷ್ಕರವಾದ ಕಾರ್ಯಗಳೂ ಸಹ ಸಹಾಯಕರ ಸಹಕಾರದಿಂದ ಸಾಧಿಸಲ್ಪಡುತ್ತವೆ. ॥ ೨೪ ॥

**ಅಭಿಪ್ರಾಯಂ ಯೋ ವಿದಿತ್ವಾ ತು ಭರ್ತುಃ**
**ಸರ್ವಾಣಿ ಕಾರ್ಯಾಣಿ ಕರೋತ್ಯತಂದ್ರೀ ।**
**ವಕ್ತಾ ಹಿತಾನಾಮನುರಕ್ತ ಆರ್ಯಃ**
**ಶಕ್ತಿಜ್ಞ ಆತ್ಮೇವ ಹಿ ಸೋಽನುಕಂಪ್ಯಃ ॥ ೨೫ ॥**

ಯಾವ ಸೇವಕನು ಸ್ವಾಮಿಯ ಅಭಿಪ್ರಾಯವನ್ನು ತಿಳಿದು ಆಲಸ್ಯವಿಲ್ಲದೇ ಎಲ್ಲ ಕಾರ್ಯಗಳನ್ನೂ ಮಾಡುತ್ತಾನೆಯೋ, ಯಾರು ಹಿತವಾದ ಮಾತುಗಳನ್ನೇ ಆಡುತ್ತಾನೆಯೋ, ಸ್ವಾಮಿಭಕ್ತನಾಗಿದ್ದು ಸಜ್ಜನನಾಗಿದ್ದು ಯಜಮಾನನ ಶಕ್ತಿ ಸಾಮರ್ಥ್ಯಗಳನ್ನು ಅರಿತಿರುತ್ತಾನೆಯೋ - ಅಂತಹವನನ್ನು ತನಗೆ ಸಮಾನವೆಂದು ಭಾವಿಸಿ ಅನುಕಂಪದಿಂದ ನೋಡಿಕೊಳ್ಳಬೇಕು. ॥ ೨೫ ॥

**ವಾಕ್ಯಂ ತು ಯೋ ನಾದ್ರಿಯತೇಽನುಶಿಷ್ಟಃ**
**ಪ್ರತ್ಯಾಹ ಯಶ್ಚಾಪಿ ನಿಯುಜ್ಯಮಾನಃ ।**
**ಪ್ರಜ್ಞಾಭಿಮಾನೀ ಪ್ರತಿಕೂಲವಾದೀ**
**ತ್ಯಾಜ್ಯಃ ಸ ತಾದೃಕ್ ತ್ವರಯೈವ ಭೃತ್ಯಃ ॥ ೨೬ ॥**

ಯಾವ ಸೇವಕನು ಸ್ವಾಮಿಯಿಂದ ಆಜ್ಞಪ್ತನಾದರೂ ಆತನ ಮಾತನ್ನು ಆದರಿಸುವುದಿಲ್ಲವೋ, ಯಾವುದಾದರೂ ಕಾರ್ಯದಲ್ಲಿ ನಿಯೋಜಿಸಿದರೆ ಒಡನೆಯೇ ಕಾರ್ಯರತನಾಗದೇ ವಿಳಂಬಿಸುವನೋ, ತನ್ನ ಬುದ್ಧಿಸಾಮರ್ಥ್ಯದ ಬಗ್ಗೆ ಅಹಂಕಾರವನ್ನು ಹೊಂದಿರುವನೋ ಹಾಗೂ ಪ್ರತಿಕೂಲವಾದ ಮಾತುಗಳನ್ನೇ ಆಡುವನೋ - ಅಂತಹ

ಅಸ್ತಬ್ಧಮಕ್ಲೀಬಮದೀರ್ಘಸೂತ್ರಂ
ಸಾನುಕ್ರೋಶಂ ಶ್ಲಕ್ಷ್ಣಮಹಾರ್ಯಮನ್ಯೈಃ।
ಅರೋಗಜಾತೀಯಮುದಾರವಾಕ್ಯಂ
ದೂತಂ ವದಂತ್ಯಷ್ಟಗುಣೋಪಪನ್ನಮ್ ॥ ೨೭ ॥

ಅಹಂಕಾರರಾಹಿತ್ಯ, ದೌರ್ಬಲ್ಯವಿಲ್ಲದಿರುವಿಕೆ, ಕೆಲಸಗಳನ್ನು ಬೇಗನೆ (ತಡಮಾಡದೆ) ಮಾಡಿಮುಗಿಸುವುದು, ದಯಾಳುವಾಗಿರುವುದು, ಹೃದಯಶುದ್ಧಿ, ಮತ್ತೊಬ್ಬರು ತೋರಿಸುವ ಆಮಿಷಕ್ಕೆ ಒಳಗಾಗದಿರುವುದು, ರೋಗ ರುಜಿನಗಳಿಲ್ಲದ ಕುಲದಲ್ಲಿ ಜನ್ಮತಾಳಿರುವುದು, ಉದಾರವಾದ (ಗಾಂಭೀರ್ಯದ) ಮಾತುಗಳನ್ನಾಡುವುದು – ಈ ಎಂಟು ಗುಣಗಳಿಂದ ಕೂಡಿರುವ ಮನುಷ್ಯನು 'ದೂತ'ನಾಗಲು ಯೋಗ್ಯನೆಂದು ಪರಿಗಣಿಸಲ್ಪಡುತ್ತಾನೆ. ॥ ೨೭ ॥

ನ ವಿಶ್ವಾಸಾಜ್ಜಾತು ಪರಸ್ಯ ಗೇಹೇ
ಗಚ್ಛೇನ್ನರಶ್ಚೇತಯಾನೋ ವಿಕಾಲೇ।
ನ ಚತ್ವರೇ ನಿಶಿ ತಿಷ್ಠೇನ್ನಿಗೂಢೋ
ನ ರಾಜಕಾಮ್ಯಾಂ ಯೋಷಿತಂ ಪ್ರಾರ್ಥಯೀತ ॥ ೨೮ ॥

ಬುದ್ಧಿವಂತನಾದವನು ವಿಶ್ವಾಸವಿಟ್ಟು ಅಕಾಲದಲ್ಲಿ ಬೇರೆಯವರ ಮನೆಗೆ ಹೋಗಬಾರದು. ನಾಲ್ಕು ಬೀದಿಗಳು ಸೇರುವ ಸ್ಥಳದಲ್ಲಿ ರಾತ್ರಿಯ ವೇಳೆಯಲ್ಲಿ ನಿಗೂಢವಾಗಿ ಕುಳಿತುಕೊಳ್ಳಬಾರದು. ರಾಜನು ಕಾಮಿಸಿರುವ ಸ್ತ್ರೀಯನ್ನು ಅಪೇಕ್ಷಿಸಬಾರದು. ॥ ೨೮ ॥

ನ ನಿಹ್ನವಂ ಮಂತ್ರಗತಸ್ಯ ಗಚ್ಛೇತ್
ಸಂಸೃಷ್ಟಮಂತ್ರಸ್ಯ ಕುಸಂಗತಸ್ಯ।
ನ ಚ ಬ್ರೂಯಾನ್ನಾಶ್ವಸಿಮಿ ತ್ವಯೀತಿ
ಸಕಾರಣಂ ವ್ಯಪದೇಶಂ ತು ಕುರ್ಯಾತ್ ॥ ೨೯ ॥

ನಾನಾ ವಿಧವಾದ ಅಭಿಪ್ರಾಯಗಳನ್ನು ಹೊಂದಿರುವವರೊಡನೆ ಹಾಗೂ ದುಷ್ಟರೊಂದಿಗೆ ಮಂತ್ರಾಲೋಚನೆ ನಡೆಸುತ್ತಿರುವಾಗ, ಆ ಸಮಯದಲ್ಲಿ ಆತನ ಮಾತನ್ನು ಖಂಡಿಸುವುದಾಗಲೀ – 'ನಿನ್ನಲ್ಲಿ ನನಗೆ ವಿಶ್ವಾಸವಿಲ್ಲ' ಎಂದು ಹೇಳುವುದನ್ನಾಗಲೀ ಮಾಡಬಾರದು. ಯಾವುದಾದರೂ ನಂಬಲರ್ಹವಾದ ಕಾರಣಗಳನ್ನು ಹೇಳಿ ಆ ಮಂತ್ರಾಲೋಚನ ಸಭೆಗೆ ಹೋಗುವುದನ್ನು ತಪ್ಪಿಸಿಕೊಳ್ಳಬೇಕು. ॥ ೨೯ ॥

**ಘೃಣೀ ರಾಜಾ ಪುಂಶ್ಚಲೀ ರಾಜಭೃತ್ಯಃ**
**ಪುತ್ರೋ ಭ್ರಾತಾ ವಿಧವಾ ಬಾಲಪುತ್ರಾ ।**
**ಸೇನಾಜೀವೀ ಚೋದ್ಧೃತಭೂತಿರೇವ**
**ವ್ಯವಹಾರೇಷು ವರ್ಜನೀಯಾಃ ಸ್ಯುರೇತೇ ॥ ೩೦ ।**

ಬಹು ದಯಾಳುವಾದ ರಾಜ, ವ್ಯಭಿಚಾರಿಣಿಯಾದ ಹೆಂಗಸು, ರಾಜಸೇವಕ, ಃ ಸಹೋದರ, ಸಣ್ಣಮಗುವಿರುವ ವಿಧವೆ, ಸೈನಿಕ, ಅಧಿಕಾರದಿಂದ ತೆಗೆದು ಹಾಕಲ್ಪಟ್ಟವನ ಇವರೊಂದಿಗೆ ಯಾವುದೇ ವ್ಯವಹಾರವನ್ನೂ ಮಾಡಬಾರದು. ॥ ೩೦ ॥

**ಅಷ್ಟೌ ಗುಣಾಃ ಪುರುಷಂ ದೀಪಯಂತಿ**
**ಪ್ರಜ್ಞಾ ಚ ಕೌಲ್ಯಂ ಚ ಶ್ರುತಂ ದಮಶ್ಚ ।**
**ಪರಾಕ್ರಮಶ್ಚಾಬಹುಭಾಷಿತಾ ಚ**
**ದಾನಂ ಯಥಾಶಕ್ತಿ ಕೃತಜ್ಞತಾ ಚ ॥ ೩೧ ॥**

ಬುದ್ಧಿ, ಸತ್ಕುಲಪ್ರಸೂತಿ, ಶಾಸ್ತ್ರಜ್ಞಾನ, ಇಂದ್ರಿಯನಿಗ್ರಹ, ಪರಾಕ್ರ ಮಿತಭಾಷಣ, ಯಥಾಶಕ್ತಿ ದಾನಮಾಡುವುದು ಹಾಗೂ ಕೃತಜ್ಞತೆ - ಈ ಎಂ ಗುಣಗಳು ಮಾನವನನ್ನು ತೇಜೋವಂತನನ್ನಾಗಿ ಮಾಡುತ್ತವೆ. ॥ ೩೧ ॥

**ಏತಾನ್ ಗುಣಾಂಸ್ತಾತ ಮಹಾನುಭಾವಾ-**
**ನೇಕೋ ಗುಣಃ ಸಂಶ್ರಯತೇ ಪ್ರಸಹ್ಯ ।**
**ರಾಜಾ ಯದಾ ಸತ್ಕುರುತೇ ಮನುಷ್ಯಂ**
**ಸರ್ವಾನ್ ಗುಣಾನೇಷ ಗುಣೋ ಬಿಭರ್ತಿ ॥ ೩೨ ॥**

ತಾತ ! ಮತ್ತೊಂದು ಗುಣವಿದೆ. ಆ ಗುಣವು ನಾನು ಮೇಲೆ ಹೇಳಿದ ಎಂ ಗುಣಗಳನ್ನೂ ಸಹ ಮೀರಿಸಿರತಕ್ಕದ್ದು. ರಾಜನಾದವನು, ಆ ಎಂಟುಗುಣಗಳಿ ಪರಿಪೂರ್ಣನಾದವನನ್ನು ಸಮ್ಮಾನಿಸುವುದೇ ಆ ದೊಡ್ಡಗುಣ. ರಾಜನು ಅಂತ ಗುಣವಂತನನ್ನು ತನ್ನವನನ್ನಾಗಿ ಮಾಡಿಕೊಳ್ಳುವುದರಿಂದ ಅಷ್ಟಗುಣಗಳ ಹೊಂದಿರುವವನಿಗಿಂತಲೂ ಹೆಚ್ಚು ಖ್ಯಾತಿವಂತನಾಗುತ್ತಾನೆ. ॥ ೩೨ ॥

**ಗುಣಾ ದಶ ಸ್ನಾನಶೀಲಂ ಭಜಂತೇ**
**ಬಲಂ ರೂಪಂ ಸ್ವರವರ್ಣಪ್ರಶುದ್ಧಿಃ ।**
**ಸ್ಪರ್ಶಶ್ಚ ಗಂಧಶ್ಚ ವಿಶುದ್ಧತಾ ಚ**

ಬಲ, ರೂಪ, ಕಂಠಮಾಧುರ್ಯ, ಉಜ್ಜ್ವಲ ವರ್ಣ, ಕೋಮಲತೆ, ಸೌಗಂಧ್ಯ, ಪವಿತ್ರತೆ, ಕಾಂತಿ, ಸೌಕುಮಾರ್ಯ ಮತ್ತು ಉತ್ತಮ ಸ್ತ್ರೀ ಸಹವಾಸ - ಈ ಹತ್ತು ಗುಣಗಳು ನಿತ್ಯವೂ ಸ್ನಾನಮಾಡುವವನನ್ನು ಆಶ್ರಯಿಸುತ್ತವೆ. ॥ ೩೩ ॥

**ಗುಣಾಶ್ಚ ಷಣ್ಮಿತಭುಕ್ತಂ ಭಜಂತೇ**
**ಆರೋಗ್ಯಮಾಯುಶ್ಚ ಬಲಂ ಸುಖಂ ಚ ।**
**ಅನಾವಿಲಂ ಚಾಸ್ಯ ಭವತ್ಯಪತ್ಯಂ**
**ನ ಚೈನಮಾದ್ಯೂನ ಇತಿ ಕ್ಷಿಪಂತಿ ॥ ೩೪ ॥**

ಮಿತವಾಗಿ ಊಟ ಮಾಡುವವನನ್ನು ಆರು ಗುಣಗಳು ಆಶ್ರಯಿಸಿರುತ್ತವೆ. ಆರೋಗ್ಯ, ಆಯುಷ್ಯ, ಬಲ ಹಾಗೂ ಸುಖವನ್ನು ಪಡೆಯುವುದರೊಂದಿಗೆ ಆತನು ಅಕಲುಷಿತವಾದ ಸಂತಾನವನ್ನು ಪಡೆಯುತ್ತಾನೆ. ಇದರೊಂದಿಗೆ ಯಾರೂ ಮಿತಾಹಾರಿಯನ್ನು 'ಹೊಟ್ಟೆಬಾಕ'ನೆಂದು ನಿಂದಿಸುವುದಿಲ್ಲ. ॥ ೩೪ ॥

**ಅಕರ್ಮಶೀಲಂ ಚ ಮಹಾಶನಂ ಚ**
**ಲೋಕದ್ವಿಷ್ಟಂ ಬಹುಮಾಯಂ ನೃಶಂಸಮ್ ।**
**ಅದೇಶಕಾಲಜ್ಞಮನಿಷ್ಟವೇಷ-**
**ಮೇತಾನ್ ಗೃಹೇ ನ ಪ್ರತಿವಾಸಯೇತ ॥ ೩೫ ॥**

ಕೆಲಸಮಾಡದವನು, ಹೆಚ್ಚು ತಿನ್ನುವವನು, ಎಲ್ಲರೊಡನೆ ದ್ವೇಷಕಟ್ಟಿಕೊಳ್ಳುವವನು, ಮೋಸಗಾರ, ಕ್ರೂರಿ, ದೇಶಕಾಲದ ಔಚಿತ್ಯಜ್ಞಾನವಿಲ್ಲದವ, ಅನಾಗರೀಕ ವೇಷಭೂಷಣಾದಿಗಳನ್ನು ಧರಿಸುವವನು - ಇವರುಗಳನ್ನು ಮನೆಯಲ್ಲಿಟ್ಟುಕೊಳ್ಳಬಾರದು. ॥ ೩೫ ॥

**ಕದರ್ಯಮಾಕ್ರೋಶಕಮಶ್ರುತಂ ಚ**
**ವನೌಕಸಂ ಧೂರ್ತಮಮಾನ್ಯಮಾನಿನಮ್ ।**
**ನಿಷ್ಠೂರಿಣಂ ಕೃತವೈರಂ ಕೃತಘ್ನ-**
**ಮೇತಾನ್ ಭೃಶಾರ್ತೋಽಪಿ ನ ಜಾತು ಯಾಚೇತ್ ॥ ೩೬ ॥**

ಎಂತಹುದೇ ಸಂಕಷ್ಟದ ಪರಿಸ್ಥಿತಿಯಲ್ಲಿದ್ದರೂ ಸಹ ಕೃಪಣನನ್ನೂ, ಪರನಿಂದಕನನ್ನೂ, ವೇದ-ಶಾಸ್ತ್ರಗಳ ತಿಳುವಳಿಕೆಯಿಲ್ಲದವನನ್ನೂ, ಅರಣ್ಯವಾಸಿಯನ್ನೂ, ಮೋಸಗಾರನನ್ನೂ, ನೀಚಜನರ ಸೇವಕನನ್ನೂ (ಯೋಗ್ಯರನ್ನು ಗೌರವಿಸದವನನ್ನೂ), ದಯಾರಹಿತನಾದವನನ್ನೂ, ಎಲ್ಲರೊಂದಿಗೂ ವೈರಕಟ್ಟಿಕೊಳ್ಳುವವನನ್ನೂ, ಕೃತಘ್ನನನ್ನೂ ಎಂದೂ ಯಾಚಿಸಬಾರದು. ॥ ೩೬ ॥

**ಸಂಕ್ಲಿಷ್ಟಕರ್ಮಾಣಮತಿಪ್ರಮಾದಂ**
**ನಿತ್ಯಾನೃತಂ ಚಾದೃಢಭಕ್ತಿಕಂ ಚ ।**
**ವಿಸೃಷ್ಟರಾಗಂ ಪಟುಮಾನಿನಂ ಚಾ-**
**ಪ್ಯೇತಾನ್ ನ ಸೇವೇತ ನರಾಧಮಾನ್ ಷಟ್ ॥ ೩೭ ॥**

ಬೇರೆಯವರಿಗೆ ಕ್ಲೇಶವನ್ನುಂಟುಮಾಡುವ ಕಾರ್ಯಗಳಲ್ಲಿಯೇ ತೊಡಗಿರುವವನ ಕಾರ್ಯದಲ್ಲಿ ಪ್ರಮಾದ ಮಾಡುವವನು, ಸುಳ್ಳುಗಾರ, ದೇವರಲ್ಲಿ ದೃಢಭಕ್ತಿಯಿರದ ಸ್ನೇಹರಹಿತ, ತಾನೇ ಕಾರ್ಯಪಟುವೆಂಬ ದುರಭಿಮಾನವನ್ನು ತಾಳಿದವ – ಈ ಆರ ವಿಧದ ಜನರು ನರಾಧಮರು. ಇಂತಹವರನ್ನೆಂದೂ ಸೇವಿಸಬಾರದು. ॥ ೩೭ ॥

**ಸಹಾಯಬಂಧನಾ ಹ್ಯರ್ಥಾಃ ಸಹಾಯಾಶ್ಚಾರ್ಥಬಂಧನಾಃ ।**
**ಅನ್ಯೋನ್ಯಬಂಧನಾವೇತೌ ವಿನಾನ್ಯೋನ್ಯಂ ನ ಸಿಧ್ಯತಃ ॥ ೩೮ ॥**

ಮತ್ತೊಬ್ಬರ ಸಹಾಯವಿಲ್ಲದೇ ಹಣದ ಸಂಪಾದನೆಯಾಗದು. ಅರ್ಥ ಪ್ರಯೋಜನವಿಲ್ಲದಿದ್ದರೆ ಸಹಾಯಕರು ಮುಂದೆ ಬರಲಾರರು. ಆದುದರಿಂ ಹಣಕ್ಕೂ ಮತ್ತು ಸಹಾಯಕರಿಗೂ ಅನ್ಯೋನ್ಯಬಂಧನವಿದೆ. ಈ ಎರಡರ ಅನ್ಯೋನ್ಯತೆಯಿಲ್ಲದಿದ್ದರೆ ಎರಡೂ ಸಿದ್ಧಿಸುವುದಿಲ್ಲ. ॥ ೩೮ ॥

**ಉತ್ಪಾದ್ಯ ಪುತ್ರಾನನೃಣಾಂಶ್ಚ ಕೃತ್ವಾ**
**ವೃತ್ತಿಂ ಚ ತೇಭ್ಯೋಽನುವಿಧಾಯ ಕಾಂಚಿತ್ ।**
**ಸ್ಥಾನೇ ಕುಮಾರೀಃ ಪ್ರತಿಪಾದ್ಯ ಸರ್ವಾ**
**ಅರಣ್ಯಸಂಸ್ಥೋಽಥ ಮುನಿರ್ಬುಭೂಷೇತ್ ॥ ೩೯ ॥**

ಮಕ್ಕಳನ್ನು ಪಡೆದು, ಅವರನ್ನು ಋಣಮುಕ್ತರನ್ನಾಗಿ ಮಾಡಿ (ಮಕ್ಕಳಿ ಸಾಲವನ್ನಿಟ್ಟಿರದೇ), ಅವರ ಜೀವಿಕೆಗಾಗಿ ಯಾವುದಾದರೊಂದು ವೃತ್ತಿಯನ ಕಲ್ಪಿಸಿಕೊಟ್ಟು, ಹೆಣ್ಣುಮಕ್ಕಳನ್ನೆಲ್ಲಾ ಸೂಕ್ತವಾದೆಡೆ ವಿವಾಹ ಮಾಡಿ ಅ ನಂತ ಅರಣ್ಯವನ್ನು ಸೇರಿ ಮುನಿವೃತ್ತಿಯಿಂದಿರಲು ಪ್ರಯತ್ನಿಸಬೇಕು. ॥ ೩೯ ॥

**ಹಿತಂ ಯತ್ ಸರ್ವಭೂತಾನಾಮಾತ್ಮನಶ್ಚ ಸುಖಾವಹಮ್ ।**
**ತತ್ ಕುರ್ಯಾದೀಶ್ವರೋ ಹ್ಯೇತನ್ಮೂಲಂ ಸರ್ವಾರ್ಥಸಿದ್ಧಯೇ ॥ ೪೦ ॥**

ಕಾರ್ಯವು ಯಾವುದಿದೆಯೋ ಅದನ್ನೇ ಮಾಡಬೇಕು ಮತ್ತು ಅಂತಹ ಕಾರ್ಯವನ್ನೂ ಸಹ ಈಶ್ವರಾರ್ಪಣ ಬುದ್ಧಿಯಿಂದಲೇ ಮಾಡಬೇಕು. ಸರ್ವಾರ್ಥಸಿದ್ಧಿಗೆ ಅದೇ ಮೂಲಮಂತ್ರವಾಗಿದೆ. ॥ ೪೦ ॥

ವೃದ್ಧಿಃ ಪ್ರಭಾವಸ್ತೇಜಶ್ಚ ಸತ್ತ್ವಮುತ್ಥಾನಮೇವ ಚ ।
ವ್ಯವಸಾಯಶ್ಚ ಯಸ್ಯ ಸ್ಯಾತ್ ತಸ್ಯಾವೃತ್ತಿಭಯಂ ಕುತಃ ॥ ೪೧ ॥

ಯಾರಿಗೆ ಐಶ್ವರ್ಯವನ್ನು ವೃದ್ಧಿಸಿಕೊಳ್ಳುವ ಶಕ್ತಿ ಪ್ರಭಾವ, ತೇಜಸ್ಸು, ಪರಾಕ್ರಮ ಹಾಗೂ ಜಾಗರೂಕನಾಗಿದ್ದು ಕಾರ್ಯದಲ್ಲಿ ಪ್ರವೃತ್ತನಾಗಿರುವ ಗುಣಗಳಿರುವುದೋ - ಅಂತಹವನಿಗೆ ನಿರುದ್ಯೋಗದ ಭಯವೆಲ್ಲಿಯದು ? ॥ ೪೧ ॥

ಪಶ್ಯ ದೋಷಾನ್ ಪಾಂಡವೈರ್ವಿಗ್ರಹೇ ತ್ವಂ
ಯತ್ರ ವ್ಯಥೇಯುರಪಿ ದೇವಾಃ ಸಶಕ್ರಾಃ ।
ಪುತ್ರೈರ್ವೈರಂ ನಿತ್ಯಮುದ್ವಿಗ್ನವಾಸೋ
ಯಶಃಪ್ರಣಾಶೋ ದ್ವಿಷತಾಂ ಚ ಹರ್ಷಃ ॥ ೪೨ ॥

ಪಾಂಡವರೊಡನೆ ಯುದ್ಧಮಾಡುವುದರಲ್ಲಿರುವ ದೋಷಗಳನ್ನು ಮನಗಾಣು. ಇದರಿಂದಾಗಿ ಇಂದ್ರಾದಿ ದೇವತೆಗಳೆಲ್ಲರಿಗೂ ವ್ಯಥೆಯುಂಟಾಗುತ್ತದೆ. ಮೇಲಾಗಿ ಮಕ್ಕಳೊಡನೆಯೇ ವೈರ, ನಿತ್ಯವೂ ಉದ್ವೇಗಪೂರ್ಣವಾದ ಜೀವನ, ಯಶಸ್ಸಿನ ನಾಶ ಹಾಗೂ ಶತ್ರುಗಳಿಗೆ ಹರ್ಷ ಉಂಟಾಗುತ್ತದೆ. ॥ ೪೨ ॥

ಭೀಷ್ಮಸ್ಯ ಕೋಪಸ್ತವ ಚೈವೇಂದ್ರಕಲ್ಪ
ದ್ರೋಣಸ್ಯ ರಾಜ್ಞಶ್ಚ ಯುಧಿಷ್ಠಿರಸ್ಯ ।
ಉತ್ಪಾದಯೇಲ್ಲೋಕಮಿಮಂ ಪ್ರವೃದ್ಧಃ
ಶ್ವೇತೋ ಗ್ರಹಸ್ತಿರ್ಯಗಿವಾಪತನ್ ಖೇ ॥ ೪೩ ॥

ಇಂದ್ರಕಲ್ಪನೇ ! ಆಕಾಶದಿಂದ ತಲೆಕೆಳಗಾಗಿ ಬೀಳುತ್ತಿರುವ ಧೂಮಕೇತುವು ಪ್ರಪಂಚಕ್ಕೆ ಅನಿಷ್ಟವನ್ನುಂಟುಮಾಡುವಂತೆ ಭೀಷ್ಮದ್ರೋಣಯುಧಿಷ್ಠಿರರ ಹಾಗೂ ನಿನ್ನ ಕೋಪವು ಉಲ್ಬಣಿಸಿದರೆ ಅದು ಈ ಪ್ರಪಂಚವನ್ನೇ ಸಂಪೂರ್ಣವಾಗಿ ವಿನಾಶ ಮಾಡಿಬಿಡುವುದು. ॥ ೪೩ ॥

ತವ ಪುತ್ರಶತಂ ಚೈವ ಕರ್ಣಃ ಪಂಚ ಚ ಪಾಂಡವಾಃ ।
ಪೃಥಿವೀಮನುಶಾಸೇಯುರಖಿಲಾಂ ಸಾಗರಾಂಬರಾಮ್ ॥ ೪೪ ॥

ನಿನ್ನ ನೂರುಮಂದಿ ಮಕ್ಕಳು, ಕರ್ಣ ಮತ್ತು ಪಂಚಪಾಂಡವರು - ಇವರೆಲ್ಲ ಸೇರಿಕೊಂಡು ಸಮುದ್ರಪರ್ಯಂತವಾದ ಅಖಂಡ ಪೃಥ್ವಿಯನ್ನು ಆಳಬಹುದಾಗಿದೆ ॥ ೪೪

**ಧಾರ್ತರಾಷ್ಟ್ರಾ ವನಂ ರಾಜನ್ ವ್ಯಾಘ್ರಾಃ ಪಾಂಡುಸುತಾ ಮತಾಃ ।**
**ಮಾ ವನಂ ಛಿಂಧಿ ಸವ್ಯಾಘ್ರಂ ಮಾ ವ್ಯಾಘ್ರಾನ್ ನೀನಶನ್ ವನಾತ್ ॥ ೪೫ ॥**

ರಾಜನೇ ! ನಿನ್ನ ಮಕ್ಕಳು ಅರಣ್ಯಪ್ರಾಯವಾಗಿರುತ್ತಾರೆ. ಪಾಂಡುವಿನ ಮಕ್ಕಳು ವನದಲ್ಲಿ ವ್ಯಾಘ್ರಪ್ರಾಯರಾಗಿರುತ್ತಾರೆ. ವ್ಯಾಘ್ರಸಹಿತವಾಗಿರುವ ಅರಣ್ಯವ ನಾಶಮಾಡಬೇಡ. ಅಂತೆಯೇ ಅರಣ್ಯದೊಳಗಿರುವ ವ್ಯಾಘ್ರಗಳನ್ನೂ ಹೊರಗಟ್ಟಿ (ನಾಶಪಡಿಸಲು) ಪ್ರಯತ್ನಿಸಬೇಡ. ॥ ೪೫ ॥

**ನ ಸ್ಯಾದ್ವನಮೃತೇ ವ್ಯಾಘ್ರಾನ್ ವ್ಯಾಘ್ರಾ ನ ಸ್ಯುರ್ಋತೇ ವನಮ್ ।**
**ವನಂ ಹಿ ರಕ್ಷ್ಯತೇ ವ್ಯಾಘ್ರೈರ್ವ್ಯಾಘ್ರಾನ್ ರಕ್ಷತಿ ಕಾನನಮ್ ॥ ೪೬ ॥**

ಹುಲಿಗಳಿಲ್ಲದೇ ಅರಣ್ಯವಿರುವುದಿಲ್ಲ, ಅರಣ್ಯವನ್ನು ಬಿಟ್ಟು ಹುಲಿಗಳಿರಲಾರ ಹುಲಿಗಳಿಂದ ಅರಣ್ಯವು ರಕ್ಷಿತವಾಗುತ್ತದೆ. ಅರಣ್ಯವು ಹುಲಿಗಳನ್ನು ರಕ್ಷಿಸುತ್ತದೆ. ॥ ೪೬

**ನ ತಥೇಚ್ಛಂತಿ ಕಲ್ಯಾಣಾನ್ ಪರೇಷಾಂ ವೇದಿತುಂ ಗುಣಾನ್ ।**
**ಯಥೈಷಾಂ ಜ್ಞಾತುಮಿಚ್ಛಂತಿ ನೈರ್ಗುಣ್ಯಂ ಪಾಪಚೇತಸಃ ॥ ೪೭ ॥**

ಪಾಪಬುದ್ಧಿಯುಳ್ಳವರಿಗೆ ಇತರರಲ್ಲಿರುವ ದೋಷಗಳನ್ನು ತಿಳಿದುಕೊಳ್ಳಲು ಬಹು ಆ ಇರುವಂತೆ ಇತರರಲ್ಲಿರುವ ಉತ್ತಮಗುಣಗಳನ್ನು ತಿಳಿದುಕೊಳ್ಳುವ ಆಸಕ್ತಿಯಿರುವುದಿಲ್ಲ ॥ ೪೭

**ಅರ್ಥಸಿದ್ಧಿಂ ಪರಾಮಿಚ್ಛನ್ ಧರ್ಮಮೇವಾದಿತಶ್ಚರೇತ್ ।**
**ನ ಹಿ ಧರ್ಮಾದಪೈತ್ಯರ್ಥಃ ಸ್ವರ್ಗಲೋಕಾದಿವಾಮೃತಮ್ ॥ ೪೮ ॥**

ಯಾರು ಅರ್ಥಸಿದ್ಧಿಯನ್ನು ಅಭಿಲಾಷಿಸುತ್ತಾನೆಯೋ ಅವನು ಮೊದಲಿನಿಂದಲ ಧರ್ಮಕಾರ್ಯವನ್ನೇ ಮಾಡುತ್ತಿರಬೇಕು. ಅಮೃತವು ಸ್ವರ್ಗದಿಂದ ಹೇಗೆ ದೂರವಿಲ್ಲವೋ ಹಾಗೆಯೇ ಅರ್ಥವು ಧರ್ಮದಿಂದ ದೂರವಿರದು. ॥ ೪೮ ॥

**ಯಸ್ಯಾತ್ಮಾ ವಿರತಃ ಪಾಪಾತ್ ಕಲ್ಯಾಣೇ ಚ ನಿವೇಶಿತಃ ।**
**ತೇನ ಸರ್ವಮಿದಂ ಬುದ್ಧಂ ಪ್ರಕೃತಿರ್ವಿಕೃತಿಶ್ಚ ಯಾ ॥ ೪೯ ॥**

ಯಾವನ ಆತ್ಮವು ಪಾಪಕಾರ್ಯಗಳಿಂದ ದೂರವಾಗಿ ಕಲ್ಯಾಣಮಯನಾದ ಬ್ರಹ್ಮನ ಲೀನವಾಗಿರುವುದೋ ಅಂತಹವನಿಗೆ ಈ ಪ್ರಪಂಚದಲ್ಲಿಯು ಪ್ರಕೃತಿ ಹಾಗ

**ಯೋ ಧರ್ಮಮರ್ಥಂ ಕಾಮಂ ಚ ಯಥಾಕಾಲಂ ನಿಷೇವತೇ ।**
**ಧರ್ಮಾರ್ಥಕಾಮಸಂಯೋಗಂ ಸೋಽಮುತ್ರೇಹ ಚ ವಿಂದತಿ ॥ ೫೦ ॥**

ಯಾವನು ಧರ್ಮ, ಅರ್ಥ ಮತ್ತು ಕಾಮಗಳನ್ನು ಕಾಲಾನುಗುಣವಾಗಿ ಸೇವಿಸುತ್ತಾನೆಯೋ ಅವನು ಧರ್ಮಾರ್ಥಕಾಮಗಳ ಸಂಯೋಗದಿಂದ ಪ್ರಾಪ್ತವಾಗುವ ಫಲವನ್ನು ಇಹ-ಪರಗಳೆರಡರಲ್ಲಿಯೂ ಪಡೆಯುತ್ತಾನೆ. ॥ ೫೦ ॥

**ಸಂನಿಯಚ್ಛತಿ ಯೋ ವೇಗಮುತ್ಥಿತಂ ಕ್ರೋಧಹರ್ಷಯೋಃ ।**
**ಸ ಶ್ರಿಯೋ ಭಾಜನಂ ರಾಜನ್ ಯಶ್ಚಾಪತ್ಸು ನ ಮುಹ್ಯತಿ ॥ ೫೧ ॥**

ಯಾವನು ಕೋಪ ಮತ್ತು ಹರ್ಷಗಳ ವೇಗವನ್ನು ತಡೆಹಿಡಿಯುತ್ತಾನೆಯೋ ಮತ್ತು ಯಾವನು ಆಪತ್ಕಾಲದಲ್ಲಿಯೂ ಅಧೀರನಾಗುವುದಿಲ್ಲವೋ ಅಂತಹವನು ಸಕಲವಿಧವಾದ ಸಂಪತ್ತನ್ನೂ ಪಡೆಯಲು ಸಮರ್ಥನಾಗುತ್ತಾನೆ. ॥ ೫೧ ॥

**ಬಲಂ ಪಂಚವಿಧಂ ನಿತ್ಯಂ ಪುರುಷಾಣಾಂ ನಿಬೋಧ ಮೇ ।**
**ಯತ್ತು ಬಾಹುಬಲಂ ನಾಮ ಕನಿಷ್ಠಂ ಬಲಮುಚ್ಯತೇ ॥ ೫೨ ॥**
**ಅಮಾತ್ಯಲಾಭೋ ಭದ್ರಂ ತೇ ದ್ವಿತೀಯಂ ಬಲಮುಚ್ಯತೇ ।**
**ತೃತೀಯಂ ಧನಲಾಭಂ ತು ಬಲಮಾಹುರ್ಮನೀಷಿಣಃ ॥ ೫೩ ॥**
**ಯತ್ತ್ವಸ್ಯ ಸಹಜಂ ರಾಜನ್ ಪಿತೃಪೈತಾಮಹಂ ಬಲಮ್ ।**
**ಅಭಿಜಾತಬಲಂ ನಾಮ ತಚ್ಚತುರ್ಥಂ ಬಲಂ ಸ್ಮೃತಮ್ ॥ ೫೪ ॥**
**ಯೇನ ತ್ವೇತಾನಿ ಸರ್ವಾಣಿ ಸಂಗೃಹೀತಾನಿ ಭಾರತ ।**
**ಯದ್ ಬಲಾನಾಂ ಬಲಂ ಶ್ರೇಷ್ಠಂ ತತ್ ಪ್ರಜ್ಞಾಬಲಮುಚ್ಯತೇ ॥ ೫೫ ॥**

ರಾಜನೇ ! ಮನುಷ್ಯರಿಗೆ ಐದುವಿಧವಾದ ಬಲಗಳಿರುತ್ತವೆ. ಅವನ್ನು ಕೇಳು. ಮೊದಲನೆಯದು ಶಾರೀರಿಕ ಬಲ. ಇದು ಎಲ್ಲದಕ್ಕಿಂತ ಕನಿಷ್ಠವಾದದ್ದು. ಎರಡನೆಯದು ಅಮಾತ್ಯಬಲ – ಉತ್ತಮ ಸಮರ್ಥ ಮಂತ್ರಿಯನ್ನು ಪಡೆಯುವುದು. ಮೂರನೆಯದು ಧನಬಲ. ತಾತ-ಮುತ್ತಾತರಿಂದ ಪ್ರಾಪ್ತವಾದ ಮನುಷ್ಯನ ಸ್ವಾಭಾವಿಕವಾದ ಸತ್ಕುಲಪ್ರಸೂತಿಯೇ ಅಭಿಜಾತಬಲವೆಂಬ ನಾಲ್ಕನೆಯ ಬಲ. ಈ ನಾಲ್ಕೂ ಬಲಗಳನ್ನು ಯಾವುದರಿಂದ ಸಂಗ್ರಹಿಸಬಹುದೋ ಮತ್ತು ಯಾವುದು ಎಲ್ಲ ಬಲಗಳಿಗಿಂತಲೂ ಶ್ರೇಷ್ಠವೋ ಅದೇ ಐದನೆಯದಾದ ಪ್ರಜ್ಞಾಬಲ. ॥ ೫೨ – ೫೫ ॥

**ಮಹತೇ ಯೋಽಪಕಾರಾಯ ನರಸ್ಯ ಪ್ರಭವೇನ್ನರಃ ।**
**ತೇನ ವೈರಂ ಸಮಾಸಜ್ಯ ದೂರಸ್ಥೋಽಸ್ಮೀತಿ ನಾಶ್ವಸೇತ್ ॥ ೫೬ ॥**

ಯಾವ ಮನುಷ್ಯನು ಘೋರವಾದ ಅಪಕಾರವನ್ನು ಮಾಡ ಸಮರ್ಥನಾಗಿದ್ದಾನೆಯೋ, ಅವನೊಂದಿಗೆ ವೈರವನ್ನು ಕಟ್ಟಿಕೊಂಡು - ಅಪಕಾರಿಃ ತನ್ನಿಂದ ಬಹಳ ದೂರದಲ್ಲಿದ್ದಾನೆಂಬ ಒಂದೇ ಕಾರಣದಿಂದ - (ಅವನೇ ಮಾಡಲಾರನೆಂದು ಭಾವಿಸಿ) ನಿಶ್ಚಿಂತನಾಗಿರಕೂಡದು. ॥ ೫೬ ॥

**ಸ್ತ್ರೀಷು ರಾಜಸು ಸರ್ಪೇಷು ಸ್ವಾಧ್ಯಾಯಪ್ರಭುಶತ್ರುಷು ।**
**ಭೋಗೇಷ್ವಾಯುಷಿ ವಿಶ್ವಾಸಂ ಕಃ ಪ್ರಾಜ್ಞಃ ಕರ್ತುಮರ್ಹತಿ ॥ ೫೭ ॥**

ಸ್ತ್ರೀಯರಲ್ಲಿ, ರಾಜರಲ್ಲಿ, ಸರ್ಪಗಳಲ್ಲಿ, ಅಧ್ಯಯನದಲ್ಲಿ, ಪ್ರಭಾವಶಾಲಿಯ ವ್ಯಕ್ತಿಯಲ್ಲಿ, ಶತ್ರುವಿನಲ್ಲಿ, ಭೋಗಗಳಲ್ಲಿ ಹಾಗೂ ಆಯುಷ್ಯದಲ್ಲಿ ಯಾವ ಪ್ರಾಜ್ಞ ತಾನೇ ಸಂಪೂರ್ಣವಾಗಿ ವಿಶ್ವಾಸವಿಡುತ್ತಾನೆ ? ॥ ೫೭ ॥

**ಪ್ರಜ್ಞಾಶರೇಣಾಭಿಹತಸ್ಯ ಜಂತೋ-**
**ಶ್ಚಿಕಿತ್ಸಕಾಃ ಸಂತಿ ನ ಚೌಷಧಾನಿ ।**
**ನ ಹೋಮಮಂತ್ರಾ ನ ಚ ಮಂಗಲಾನಿ**
**ನಾಥರ್ವಣಾ ನಾಪ್ಯಗದಾಃ ಸುಸಿದ್ಧಾಃ ॥ ೫೮ ॥**

ಯಾರು ಬುದ್ಧಿಯೆಂಬ ಬಾಣದಿಂದ ಹೊಡೆಯಲ್ಪಟ್ಟಿರುವನೋ ಅವನ ರಕ್ಷಿಸಲು ಯಾವ ವೈದ್ಯನೂ ಇಲ್ಲ, ಔಷಧವೂ ಇಲ್ಲ. ಹೋಮವಾಗ ಮಂತ್ರವಾಗಲೀ, ಮಂಗಳಕಾರ್ಯವಾಗಲೀ, ಅಥರ್ವವೇದದ ಪ್ರಯೋಗವಾಗ ಅಥವಾ ಸಿದ್ಧೌಷಧವಾಗಲೀ ಇಲ್ಲ. ॥೫೮॥

**ಸರ್ಪಶ್ಚಾಗ್ನಿಶ್ಚ ಸಿಂಹಶ್ಚ ಕುಲಪುತ್ರಶ್ಚ ಭಾರತ ।**
**ನಾವಜ್ಞೇಯಾ ಮನುಷ್ಯೇಣ ಸರ್ವೇ ಹ್ಯೇತೇಽತಿತೇಜಸಃ ॥ ೫೯ ॥**

ಸರ್ಪ, ಬೆಂಕಿ, ಸಿಂಹ ಮತ್ತು ಕುಲಪುತ್ರ – ಇವರನ್ನು ಎಂದೂ ಅನಾದರದಿಂದ ಕಾಣಬಾರ ಏಕೆಂದರೆ ಇವರೆಲ್ಲರೂ ಮಹಾತೇಜಸ್ಸಿನಿಂದ ಕೂಡಿದವರಾಗಿರುತ್ತಾರೆ. ॥ ೫೯ ॥

**ಅಗ್ನಿಸ್ತೇಜೋ ಮಹಲ್ಲೋಕೇ ಗೂಢಸ್ತಿಷ್ಠತಿ ದಾರುಷು ।**
**ನ ಚೋಪಯುಂಕ್ತೇ ತದ್ದಾರು ಯಾವನ್ನೋದ್ದೀಪ್ಯತೇ ಪರೈಃ ॥ ೬೦ ॥**

ಪ್ರಪಂಚದಲ್ಲಿ ಅಗ್ನಿಯು ಮಹತ್ತರವಾದ ತೇಜಸ್ಸಿನಿಂದ ಕೂಡಿರುವುದು. ಅ ಕಟ್ಟಿಗೆಯಲ್ಲಿ ನಿಗೂಢವಾಗಿಯೇ ಇರುತ್ತದೆ. ಎಲ್ಲಿಯವರೆಗೂ ಬೇರೆಯವರು ಕಟ್ಟಿಗೆಯ

**ಸ ಏವ ಖಲು ದಾರುಭ್ಯೋ ಯದಾ ನಿರ್ಮಥ್ಯ ದೀಪ್ಯತೇ।**
**ತದ್ದಾರು ಚ ವನಂ ಚಾನ್ಯನ್ನಿರ್ದಹತ್ಯಾಶು ತೇಜಸಾ ॥ ೬೧ ॥**

ಅದೇ ಅಗ್ನಿಯು, ತಾನು ಆಶ್ರಯ ಪಡೆದ ಕಟ್ಟಿಗೆಯು ಮತ್ತೊಂದು ಕಟ್ಟಿಗೆಯೊಡನೆ ಘರ್ಷಣೆ ಹೊಂದಿದರೆ ಆ ಎರಡನ್ನೂ ಸುಡುವುದಲ್ಲದೆ ಆ ವನವನ್ನೂ ಇತರ ವಸ್ತುಗಳನ್ನೂ ಕ್ಷಣಮಾತ್ರದಲ್ಲಿ ಭಸ್ಮಮಾಡಿ ಬಿಡುತ್ತದೆ. ॥ ೬೧ ॥

**ಏವಮೇವ ಕುಲೇ ಜಾತಾಃ ಪಾವಕೋಪಮತೇಜಸಃ।**
**ಕ್ಷಮಾವಂತೋ ನಿರಾಕಾರಾಃ ಕಾಷ್ಠೇಽಗ್ನಿರಿವ ಶೇರತೇ ॥ ೬೨ ॥**

ಇದೇ ರೀತಿ ಏಕಕುಲೋತ್ಪನ್ನರಾಗಿರುವವರು ಅಗ್ನಿಯ ತೇಜಸ್ಸಿಗೆ ಸದೃಶವಾದ ತೇಜಸ್ಸುಳ್ಳವರಾಗಿದ್ದರೂ ಸಹ ಕ್ಷಮಾವಂತರಾಗಿ ನಿರಾಕಾರರಾಗಿ ಕಟ್ಟಿಗೆಯಲ್ಲಿರುವ ಅಗ್ನಿಯಂತೆಯೇ ನಿಗೂಢತೇಜಸ್ಕರಾಗಿರುತ್ತಾರೆ. ॥ ೬೨ ॥

**ಲತಾಧರ್ಮಾ ತ್ವಂ ಸಪುತ್ರಃ ಶಾಲಾಃ ಪಾಂಡುಸುತಾ ಮತಾಃ।**
**ನ ಲತಾ ವರ್ಧತೇ ಜಾತು ಮಹಾದ್ರುಮಮನಾಶ್ರಿತಾ ॥ ೬೩ ॥**

ಪುತ್ರರಿಂದೊಡಗೂಡಿರುವ ನೀನು ಸುಕೋಮಲವಾದ ಲತೆಯಂತಿರುವೆ. ಪಾಂಡುವಿನ ಮಕ್ಕಳು ಶಾಲವೃಕ್ಷಪ್ರಾಯರಾಗಿರುತ್ತಾರೆ. ಮಹಾವೃಕ್ಷಗಳನ್ನು ಆಶ್ರಯಿಸದಿರುವ ಲತೆಗಳು ಖಂಡಿತವಾಗಿಯೂ ವರ್ಧಿಸುವುದಿಲ್ಲ. ॥ ೬೩ ॥

**ವನಂ ರಾಜಂಸ್ತವ ಪುತ್ರೋಽಂಬಿಕೇಯ**
**ಸಿಂಹಾನ್ ವನೇ ಪಾಂಡವಾಂಸ್ತಾತ ವಿದ್ಧಿ।**
**ಸಿಂಹೈರ್ವಿಹೀನಂ ಹಿ ವನಂ ವಿನಶ್ಯೇತ್**
**ಸಿಂಹಾ ವಿನಶ್ಯೇಯುರ್ಋತೇ ವನೇನ ॥ ೬೪ ॥**

ರಾಜನೇ ! ಅಂಬಿಕಾತನಯ ! ನಿನ್ನ ಮಗನು ಆರಣ್ಯರೂಪನಾಗಿದ್ದಾನೆ. ಪಾಂಡವರು ಸಿಂಹಸದೃಶರಾಗಿದ್ದಾರೆಂದು ಭಾವಿಸು. ಸಿಂಹಗಳಿಂದ ವನವು ವಿಹೀನವಾದಲ್ಲಿ ಆ ವನವು ಬಹುಬೇಗ ವಿನಾಶಹೊಂದುತ್ತದೆ. ಹಾಗೆಯೇ ಅರಣ್ಯವೇ ಇಲ್ಲದಿದ್ದರೆ ಸಿಂಹಗಳೂ ನಾಶಹೊಂದುತ್ತವೆ. ಈ ವಿಷಯವನ್ನು ನೀನು ಮನಗಾಣು. ॥ ೬೪ ॥

ಇತಿ ಶ್ರೀಮಹಾಭಾರತೇ ಉದ್ಯೋಗಪರ್ವಣಿ ಪ್ರಜಾಗರಪರ್ವಣಿ
ವಿದುರಹಿತವಾಕ್ಯೇ ಸಪ್ತತ್ರಿಂಶೋಽಧ್ಯಾಯಃ ॥ ೩೭ ॥



# ಆರನೇ ಅಧ್ಯಾಯ

ವಿದುರ ಉವಾಚ

ಊರ್ಧ್ವಂ ಪ್ರಾಣಾ ಹ್ಯುತ್ಕ್ರಾಮಂತಿ ಯೂನಃ ಸ್ಥವಿರ ಆಯತಿ ।
ಪ್ರತ್ಯುತ್ಥಾನಾಭಿವಾದಾಭ್ಯಾಂ ಪುನಸ್ತಾನ್ ಪ್ರತಿಪದ್ಯತೇ ॥ ೧ ॥

ವಿದುರನು ಹೇಳಿದನು – ಮಾನನೀಯರಾದ ವೃದ್ಧರು ಸಮೀಪ ಬಂದಾಗ, ಯುವ
ಪ್ರಾಣಗಳು ಮೇಲಕ್ಕೆ ಹೋದಂತಾಗುತ್ತದೆ. ಯಾವಾಗ ಆ ಯುವಕನು ಎದ್ದು ಗೌರವ ಸೂ
ನಮಸ್ಕರಿಸುತ್ತಾನೆಯೋ ಆಗ ಪ್ರಾಣಗಳು ಯಥಾಸ್ಥಾನದಲ್ಲಿ ಉಳಿದುಕೊಳ್ಳುತ್ತವೆ. ॥ ೧

ಪೀಠಂ ದತ್ತ್ವಾ ಸಾಧವೇಽಭ್ಯಾಗತಾಯ
ಆನೀಯಾಪಃ ಪರಿನಿರ್ಣಿಜ್ಯ ಪಾದೌ ।
ಸುಖಂ ಪೃಷ್ಟ್ವಾ ಪ್ರತಿವೇದ್ಯಾತ್ಮಸಂಸ್ಥಾಂ
ತತೋ ದದ್ಯಾದನ್ನಮವೇಕ್ಷ್ಯ ಧೀರಃ ॥ ೨ ॥

ಧೀರನಾದವನು, ಆಗಮಿಸಿದ ಸಾಧುವಿಗೆ ಮೊದಲು ಕುಳಿತುಕೊಳ್ಳ
ಆಸನವನ್ನು ಕೊಡಬೇಕು. ಆನಂತರ ಶುದ್ಧೋದಕದಿಂದ ಸಾಧುವಿನ ಎರ
ಕಾಲುಗಳನ್ನೂ ತೊಳೆಯಬೇಕು. ಯೋಗಕ್ಷೇಮವನ್ನು ವಿಚಾರಿಸಿ, ತನ್ನ ಸ್ಥಿತಿಗತಿಗಳ
ಹೇಳಿಕೊಳ್ಳಬೇಕು. ಆನಂತರ ಅವರ ಅವಶ್ಯಕತೆಗಳನ್ನು ಮನಗಂಡು ಸಾಧು
ಭೋಜನಾದಿಗಳ ವ್ಯವಸ್ಥೆ ಮಾಡಬೇಕು. ॥ ೨ ॥

ಯಸ್ಯೋದಕಂ ಮಧುಪರ್ಕಂ ಚ ಗಾಂ ಚ
ನ ಮಂತ್ರವಿತ್ ಪ್ರತಿಗೃಹ್ಣಾತಿ ಗೇಹೇ ।
ಲೋಭಾದ್ ಭಯಾದಥ ಕಾರ್ಪಣ್ಯತೋ ವಾ
ತಸ್ಯಾನರ್ಥಂ ಜೀವಿತಮಾಹುರಾರ್ಯಾಃ ॥ ೩ ॥

ಮಂತ್ರವಿದನಾದ ಒಬ್ಬ ಬ್ರಾಹ್ಮಣನು – ಯಾವನ ಮನೆಯಲ್ಲಿ ದಾತೃವಿನ ಲೋ
ಭಯ ಅಥವಾ ಕೃಪಣತೆಯ ಕಾರಣದಿಂದಾಗಿ ಅರ್ಘ್ಯ, ಪಾದ್ಯ, ಮಧುಪರ್ಕ ಹಾ
ಗೋವುಗಳನ್ನು ಸ್ವೀಕರಿಸುವುದಿಲ್ಲವೋ ಅಂತಹ ಗೃಹಸ್ಥನ ಜೀವಿತವೇ ವ್ಯರ್ಥವೆಂ
ಆರ್ಯರು ಹೇಳುತ್ತಾರೆ. ॥ ೩ ॥

ಚಿಕಿತ್ಸಕಃ ಶಲ್ಯಕರ್ತಾವಕೀರ್ಣೀ

**ಸೇನಾಜೀವೀ ಶ್ರುತಿವಿಕ್ರಾಯಕಶ್ಚ**
**ಭೃಶಂ ಪ್ರಿಯೋಽಪ್ಯತಿಥಿರ್ನೋರ್ದಕಾರ್ಹಃ ॥ ೪ ॥**

ವೈದ್ಯ, ಶಸ್ತ್ರಾಸ್ತ್ರಗಳ ನಿರ್ಮಾತೃ, ಬ್ರಹ್ಮಚರ್ಯದಿಂದ ಭ್ರಷ್ಟನಾದವನು, ಕಳ್ಳ, ಕ್ರೂರಿ, ಹೆಂಡಕುಡಿಯುವವನು, ಭ್ರೂಣಹತ್ಯೆ ಮಾಡಿದವನು, ಸೈನಿಕವೃತ್ತಿಯಿಂದ ಜೀವಿಸುವವನು, ವೇದವಿಕ್ರಯ ಮಾಡುವವನು (ಸಂಬಳಕ್ಕಾಗಿ ವೇದವನ್ನು ಹೇಳಿಕೊಡುವವನು) - ಇವರು ಬಹುಪ್ರಿಯರಾದ ಅತಿಥಿಗಳೇ ಆಗಿದ್ದರೂ ಗೋಮಧುಪರ್ಕಪೂರ್ವಕವಾದ ಸತ್ಕಾರಕ್ಕೆ ಯೋಗ್ಯರಲ್ಲ (ಇವರನ್ನು ಪ್ರಿಯಬಂಧುಗಳನ್ನು ಉಪಚರಿಸುವಂತೆ ಉಪಚರಿಸಬಹುದು). ॥ ೪ ॥

**ಅವಿಕ್ರಯಂ ಲವಣಂ ಪಕ್ವಮನ್ನಂ**
**ದಧಿ ಕ್ಷೀರಂ ಮಧು ತೈಲಂ ಘೃತಂ ಚ ।**
**ತಿಲಾ ಮಾಂಸಂ ಫಲಮೂಲಾನಿ ಶಾಕಂ**
**ರಕ್ತಂ ವಾಸಃ ಸರ್ವಗಂಧಾ ಗುಡಾಶ್ಚ ॥ ೫ ॥**

ಉಪ್ಪು, ಪಕ್ವಾನ್ನ, ಮೊಸರು, ಹಾಲು, ಜೇನು, ತುಪ್ಪ, ಎಣ್ಣೆ, ಎಳ್ಳು, ಮಾಂಸ, ಕಂದಮೂಲ-ಫಲಗಳು, ಕಾಯಿಪಲ್ಯಗಳು, ಕೆಂಪುಬಟ್ಟೆ, ಎಲ್ಲ ರೀತಿಯ ಸುಗಂಧಪದಾರ್ಥಗಳು ಮತ್ತು ಬೆಲ್ಲ - ಇವುಗಳು ಮಾರುವಂತಹವುಗಳಲ್ಲ. ॥ ೫ ॥

**ಅರೋಷಣೋ ಯಃ ಸಮಲೋಷ್ಟಾಶ್ಮಕಾಂಚನಃ**
**ಪ್ರಹೀಣಶೋಕೋ ಗತಸಂಧಿವಿಗ್ರಹಃ ।**
**ನಿಂದಾಪ್ರಶಂಸೋಪರತಃ ಪ್ರಿಯಾಪ್ರಿಯೇ**
**ತ್ಯಜನ್ನುದಾಸೀನವದೇಷ ಭಿಕ್ಷುಕಃ ॥ ೬ ॥**

ಕೋಪವಿಲ್ಲದವನು, ಮಣ್ಣುಮುದ್ದೆಗೂ ಕಲ್ಲಿಗೂ ಸ್ವರ್ಣಕ್ಕೂ ವ್ಯತ್ಯಾಸವನ್ನೆಣಿಸದವನು, ಶೋಕರಹಿತನಾದವನು, ಸ್ನೇಹ-ವೈರಗಳೆರಡನ್ನೂ ತೊರೆದವನು, ನಿಂದೆ-ಪ್ರಶಂಸೆಗಳೆರಡಕ್ಕೂ ಹೊರತಾದವನು, ಪ್ರಿಯ-ಅಪ್ರಿಯವಾದದ್ದನ್ನೆಲ್ಲ ಪರಿತ್ಯಜಿಸಿ ಎಲ್ಲದರಲ್ಲಿಯೂ ಉದಾಸೀನನಾಗಿರುವವನು - ಇಂತಹವನೇ ಭಿಕ್ಷು ಅಥವಾ ಸಂನ್ಯಾಸೀ ಎನಿಸಿಕೊಳ್ಳುತ್ತಾನೆ ॥ ೬ ॥

**ನೀವಾರಮೂಲೇಂಗುದಶಾಕವೃತ್ತಿಃ**
**ಸುಸಂಯತಾತ್ಮಾಗ್ನಿಕಾರ್ಯೇಷು ಚೋದ್ಯಃ ।**
**ವನೇ ವಸನ್ನತಿಥಿಷ್ವಪ್ರಮತ್ತೋ**
**ಧುರಂಧರಃ ಪುಣ್ಯಕೃದೇಷ ತಾಪಸಃ ॥ ೭ ॥**

ಕಾಡಿನಲ್ಲಿ ಸಿಕ್ಕುವ ಧಾನ್ಯಗಳಿಂದಲೂ, ಕಂದ-ಮೂಲಗಳಿಂದಲೂ, ಇಂಗಳ ಕಾಯಿಗಳಿಂದಲೂ ಜೀವನವೃತ್ತಿಯನ್ನು ನಡೆಸುವ, ಜಿತೇಂದ್ರಿಯನ ಅಗ್ನಿಹೋತ್ರಾದಿಗಳಲ್ಲಿ ನಿರತನಾದ, ಅರಣ್ಯದಲ್ಲಿದ್ದರೂ ಅತಿಥಿಸತ್ಕಾರದಲ್ಲಿ ಆಸಕ್ತ ಪುಣ್ಯಾತ್ಮನಾದ ತಪಸ್ವಿಯು ಶ್ರೇಷ್ಠಪುರುಷನೆನಿಸಿಕೊಳ್ಳುತ್ತಾನೆ. ॥ ೭ ॥

**ಅಪಕೃತ್ಯ ಬುದ್ಧಿಮತೋ ದೂರಸ್ಥೋಽಸ್ಮೀತಿ ನಾಶ್ವಸೇತ್ ।**
**ದೀರ್ಘೌ ಬುದ್ಧಿಮತೋ ಬಾಹೂ ಯಾಭ್ಯಾಂ ಹಿಂಸತಿ ಹಿಂಸಿತಃ ॥ ೮ ॥**

ಬುದ್ಧಿವಂತನಾದವನೊಬ್ಬನಿಗೆ ಅಪಕಾರ ಮಾಡಿ ಅವನಿಂದ ದೂರದಲ್ಲಿದ್ದೇ ಕಾರಣದಿಂದ ನಿಶ್ಚಿಂತನಾಗಿರಕೂಡದು. ಬುದ್ಧಿವಂತನಾದವನ (ಬುದ್ಧಿರೂಪವ ತೋಳುಗಳು ಬಹಳ ಉದ್ದವಾಗಿದ್ದು, ಅವುಗಳಿಂದ ತನ್ನನ್ನು ಹಿಂಸಿಸಿದವನನ್ನು ಖಂಡಿತವಾಗಿಯೂ ಹಿಂಸಿಸುತ್ತಾನೆ. ॥ ೮ ॥

**ನ ವಿಶ್ವಸೇದವಿಶ್ವಸ್ತೇ ವಿಶ್ವಸ್ತೇ ನಾತಿವಿಶ್ವಸೇತ್ ।**
**ವಿಶ್ವಾಸಾದ್ ಭಯಮುತ್ಪನ್ನಂ ಮೂಲಾನ್ಯಪಿ ನಿಕೃಂತತಿ ॥ ೯ ॥**

ಯಾರು ವಿಶ್ವಾಸಪಾತ್ರನಲ್ಲವೋ ಅವನ ಮೇಲೆ ವಿಶ್ವಾಸವಿಡಬಾರದು. ಯಾ ವಿಶ್ವಾಸಪಾತ್ರನೋ ಅವನಲ್ಲಿಯೂ ಅತಿಯಾದ ವಿಶ್ವಾಸವನ್ನಿಡಬಾ ವಿಶ್ವಾಸದಿಂದಾಗಿ ಉಂಟಾಗುವ ಭಯವು ಮೂಲವನ್ನೇ ಕತ್ತರಿಸಿಬಿಡುತ್ತದೆ. ॥ ೯ ॥

**ಅನೀರ್ಷುರ್ಗುಪ್ತದಾರಶ್ಚ ಸಂವಿಭಾಗೀ ಪ್ರಿಯಂವದಃ ।**
**ಶ್ಲಕ್ಷ್ಣೋ ಮಧುರವಾಕ್ ಸ್ತ್ರೀಣಾಂ ನ ಚಾಸಾಂ ವಶಗೋ ಭವೇತ್ ॥ ೧೦ ॥**

ಮನುಷ್ಯನು ಅಸೂಯಾರಹಿತನಾಗಿರಬೇಕು. ಪತ್ನಿಯನ್ನು ಗೌರವದಿಂದ ರಕ್ಷಿಸಬೆ ಸಂಪತ್ತನ್ನು ಯೋಗ್ಯರೀತಿಯಲ್ಲಿ ಹಂಚಬಲ್ಲವ, ಪ್ರಿಯಭಾಷಿ ಹಾಗೂ ಸ್ತ್ರೀಯರೋ ಸ್ವಚ್ಛವಾದ ಮತ್ತು ಮಧುರವಾದ ಮಾತುಗಳನ್ನಾಡುವವನಾಗಿರಬೇಕು. ಆದರೆ ಸ್ತ್ರೀ ವಶನಾಗಕೂಡದು. ॥ ೧೦ ॥

**ಪೂಜನೀಯಾ ಮಹಾಭಾಗಾಃ ಪುಣ್ಯಾಶ್ಚ ಗೃಹದೀಪ್ತಯಃ ।**
**ಸ್ತ್ರಿಯಃ ಶ್ರಿಯೋ ಗೃಹಸ್ಯೋಕ್ತಾಸ್ತಸ್ಮಾದ್ರಕ್ಷ್ಯಾ ವಿಶೇಷತಃ ॥ ೧೧ ॥**

ಸ್ತ್ರೀಯರು ಪೂಜನೀಯರು, ಸೌಭಾಗ್ಯಶಾಲಿನಿಯರು, ಮನೆಗೆ ದೀಪಪ್ರಾಯ ಸೀಯರೇ ಮನೆಗೆ ಸಾಕಾತ್ ಲಕಿ ೀಸ ರೂಪರೂ ಆಗಿರುವರು. ಹಾಗಾಗಿ ಅ

**ಪಿತುರಂತಃಪುರಂ ದದ್ಯಾನ್ಮಾತುರ್ದದ್ಯಾನ್ಮಹಾನಸಮ್ ।**
**ಗೋಷು ಚಾತ್ಮಸಮಂ ದದ್ಯಾತ್ ಸ್ವಯಮೇವ ಕೃಷಿಂ ವ್ರಜೇತ್ ॥ ೧೨ ॥**

ಅಂತಃಪುರದ ರಕ್ಷಣೆಯ ಭಾರವನ್ನು ತಂದೆಗೆ ಒಪ್ಪಿಸಬೇಕು. ಅಡಿಗೆ ಮನೆಯ ಮೇಲ್ವಿಚಾರಣೆಯನ್ನು ತಾಯಿಗೊಪ್ಪಿಸಬೇಕು. ಗೋಶಾಲೆಯ ಜವಾಬ್ದಾರಿಯನ್ನು ತನಗೆ ಸರಿಸಮಾನರಾದವರಿಗೆ ವಹಿಸಿಕೊಡಬೇಕು. ಹಾಗೂ ಕೃಷಿಕಾರ್ಯವನ್ನು ತಾನೇ ವಹಿಸಿಕೊಳ್ಳಬೇಕು. ॥ ೧೨ ॥

**ಭೃತ್ಯೈರ್ವಾಣಿಜ್ಯಚಾರಂ ಚ ಪುತ್ರೈಃ ಸೇವೇತ ಚ ದ್ವಿಜಾನ್ ।**
**ಅದ್ಭ್ಯೋಽಗ್ನಿರ್ಬ್ರಹ್ಮತಃ ಕ್ಷತ್ರಮಶ್ಮನೋ ಲೋಹಮುತ್ಥಿತಮ್ ॥ ೧೩ ॥**
**ತೇಷಾಂ ಸರ್ವತ್ರಗಂ ತೇಜಃ ಸ್ವಾಸು ಯೋನಿಷು ಶಾಮ್ಯತಿ ।**

ಸೇವಕರನ್ನು ವ್ಯಾಪಾರಕ್ಕಾಗಿ ಕಳುಹಿಸಬೇಕು. ಮಕ್ಕಳಿಂದ ಬ್ರಾಹ್ಮಣರ ಸೇವೆಯನ್ನು ಮಾಡಿಸಬೇಕು. ನೀರಿನಿಂದ ಅಗ್ನಿಯು, ಬ್ರಾಹ್ಮಣನಿಂದ ಕ್ಷತ್ರಿಯನು, ಕಲ್ಲಿನಿಂದ ಲೋಹವೂ ಹುಟ್ಟಿದೆ. ಅವುಗಳ ತೇಜಸ್ಸು ಸರ್ವತ್ರವಿದ್ದರೂ, ಹುಟ್ಟಿದ ಸ್ಥಳಗಳಲ್ಲಿಯೇ ಅವು ಶಾಂತವಾಗುತ್ತವೆ. ॥ ೧೩-೧/೨ ॥

**ನಿತ್ಯಂ ಸಂತಃ ಕುಲೇ ಜಾತಾಃ ಪಾವಕೋಪಮತೇಜಸಃ ॥ ೧೪ ॥**
**ಕ್ಷಮಾವಂತೋ ನಿರಾಕಾರಾಃ ಕಾಷ್ಠೇಽಗ್ನಿರಿವ ಶೇರತೇ ।**

ಸತ್ಕುಲಪ್ರಸೂತರಾದ, ಅಗ್ನಿ ಸಮಾನವಾದ ತೇಜಸ್ಸನ್ನು ಹೊಂದಿರುವ, ಕ್ಷಮಾವಂತರಾದ, ವಿಕಾರಶೂನ್ಯರಾದ ಸತ್ಪುರುಷರು ಕಟ್ಟಿಗೆಯಲ್ಲಡಗಿರುವ ಅಗ್ನಿಯಂತೆ ಸರ್ವದಾ ಶಾಂತಭಾವದಿಂದಿರುತ್ತಾರೆ. ॥ ೧೪-೧/೨ ॥

**ಯಸ್ಯ ಮಂತ್ರಂ ನ ಜಾನಂತಿ ಬಾಹ್ಯಾಶ್ಚಾಭ್ಯಂತರಾಶ್ಚ ಯೇ ॥ ೧೫ ॥**
**ಸ ರಾಜಾ ಸರ್ವತಶ್ಚಕ್ಷುಶ್ಚಿರಮೈಶ್ವರ್ಯಮಶ್ನುತೇ ।**

ಯಾವ ರಾಜನ ಗುಪ್ತಾಲೋಚನೆಗಳನ್ನೂ, ಅಂತರಂಗಕ್ಕೆ ಮತ್ತು ಬಹಿರಂಗಕ್ಕೆ ಸೇರಿದ ಯೋಚನೆಗಳನ್ನೂ ಯಾರೂ ತಿಳಿದಿರುವುದಿಲ್ಲವೋ ಹಾಗೂ ಯಾವ ರಾಜನು ಎಲ್ಲೆಡೆಗಳಲ್ಲಿಯೂ (ಚಾರಮುಖೇನ) ತನ್ನ ದೃಷ್ಟಿಯನ್ನು ಪ್ರಸರಿಸಿರುತ್ತಾನೆಯೋ, ಅಂತಹ ರಾಜನು ಸಕಲೈಶ್ವರ್ಯಗಳನ್ನೂ ಉಪಭೋಗಿಸುತ್ತಾನೆ. ॥ ೧೫-೧/೨ ॥

**ಕರಿಷ್ಯನ್ನ ಪ್ರಭಾಷೇತ ಕೃತಾನ್ಯೇವ ತು ದರ್ಶಯೇತ್ ॥ ೧೬ ॥**
**ಧರ್ಮಕಾಮಾರ್ಥಕಾರ್ಯಾಣಿ ತಥಾ ಮಂತ್ರೋ ನ ಭಿದ್ಯತೇ ।**

ಧರ್ಮ, ಕಾಮ ಮತ್ತು ಅರ್ಥಗಳಿಗೆ ಸಂಬಂಧಿಸಿದ ಕಾರ್ಯಗಳನ್ನು ಮಾಡುವ ಪೂರ್ವಭಾವಿಯಾಗಿ ಏನೊಂದನ್ನೂ ಹೇಳಬಾರದು. ಕಾರ್ಯವನ್ನು ಪೂರೈಸಿದ ನಂತರ ಮಾಡಿದ ಕಾರ್ಯವನ್ನು ಪ್ರಚುರಪಡಿಸಬೇಕು. ಹೀಗೆ ಮಾಡುವುದರಿಂದ ಮಂತ್ರಾಲೋಚನೆ ಬೇರೆಯವರಿಗೆ ಪ್ರಕಟವಾಗುವುದಿಲ್ಲ. ॥ ೧೬-½ ॥

**ಗಿರಿಪೃಷ್ಠಮುಪಾರುಹ್ಯ ಪ್ರಾಸಾದಂ ವಾ ರಹೋಗತಃ ॥ ೧೭ ॥**
**ಅರಣ್ಯೇ ನಿಃಶಲಾಕೇ ವಾ ತತ್ರ ಮಂತ್ರೋಽಭಿಧೀಯತೇ ।**

ಪರ್ವತದ ಮೇಲ್ಭಾಗಕ್ಕೆ ಹತ್ತಿ ಅಥವಾ ಅರಮನೆಯ ಮಹಡಿಯ ಮೇಲೆ ಅಥವಾ ಹ ಗಿಡಗಳಿಲ್ಲದ ಸ್ಥಾನದಲ್ಲಿ ಕುಳಿತು ಮಂತ್ರಾಲೋಚನೆ ಮಾಡಬಹುದು. ॥ ೧೭-½ ।

**ನಾಸುಹೃತ್ ಪರಮಂ ಮಂತ್ರಂ ಭಾರತಾರ್ಹತಿ ವೇದಿತುಮ್ ॥ ೧೮ ॥**
**ಅಪಂಡಿತೋ ವಾಪಿ ಸುಹೃತ್ ಪಂಡಿತೋ ವಾಪ್ಯನಾತ್ಮವಾನ್ ।**
**ನಾಪರೀಕ್ಷ್ಯ ಮಹೀಪಾಲಃ ಕುರ್ಯಾತ್ ಸಚಿವಮಾತ್ಮನಃ ॥ ೧೯ ॥**
**ಅಮಾತ್ಯೇ ಹ್ಯರ್ಥಲಿಪ್ಸಾ ಚ ಮಂತ್ರರಕ್ಷಣಮೇವ ಚ ।**
**ಕೃತಾನಿ ಸರ್ವಕಾರ್ಯಾಣಿ ಯಸ್ಯ ಪಾರಿಷದಾ ವಿದುಃ ॥ ೨೦ ॥**
**ಧರ್ಮೇ ಚಾರ್ಥೇ ಚ ಕಾಮೇ ಚ ಸ ರಾಜಾ ರಾಜಸತ್ತಮಃ ।**
**ಗೂಢಮಂತ್ರಸ್ಯ ನೃಪತೇಸ್ತಸ್ಯ ಸಿದ್ಧಿರಸಂಶಯಮ್ ॥ ೨೧ ॥**

ಭಾರತ ! ಯಾರು ಮಿತ್ರನಲ್ಲವೋ, ಮಿತ್ರನಾಗಿದ್ದರೂ ಪಂಡಿತನಲ್ಲವ ಪಂಡಿತನಾಗಿದ್ದರೂ ಯಾರು ತನ್ನ ಮನಸ್ಸನ್ನು ನಿಗ್ರಹಿಸಿಲ್ಲವೋ ಆತನು ನಿನ್ನ ಮಂತ್ರಾಲೋಚನೆಯನ್ನು ತಿಳಿಯಲು ಅರ್ಹನಲ್ಲ. ಸರಿಯಾಗಿ ಪರೀಕ್ಷಿಸ ಯಾವೊಬ್ಬನನ್ನೂ ರಾಜನು ತನ್ನ ಮಂತ್ರಿಯನ್ನಾಗಿ ಮಾಡಿಕೊಳ್ಳಬಾರದು. ಏಕೆಂ ಧನದ ಪ್ರಾಪ್ತಿಗೆ ಹಾಗೂ ಮಂತ್ರಾಲೋಚನೆಯು ಬಹಿರಂಗಪಡದಿರುವುದಕ್ಕೆ ಮಂತ್ರಿ ಮುಖ್ಯಕಾರಣನಾಗಿರುತ್ತಾನೆ. ಯಾರ ಧರ್ಮ, ಅರ್ಥ ಹಾಗೂ ಕಾಮವಿಷಯಕವ ಎಲ್ಲ ಕಾರ್ಯಗಳೂ ಪೂರ್ಣವಾದ ಮೇಲೆ ಮಾತ್ರವೇ ಸಭಾಸದರು ತಿಳಿಯುತ್ತಾರೆಯೊ ರಾಜನು ಎಲ್ಲರಿಗಿಂತ ಶ್ರೇಷ್ಠನಾದ ರಾಜನು. ಮಂತ್ರಾಲೋಚನೆಯನ್ನು ನಿಗೂಢವಾಗಿರಿ ಆ ರಾಜನಿಗೆ ನಿಸ್ಸಂದೇಹವಾಗಿಯೂ ಸಿದ್ಧಿಯು ಪ್ರಾಪ್ತವಾಗುತ್ತದೆ. ॥ ೧೮-½-೨

**ಅಪ್ರಶಸ್ತಾನಿ ಕಾರ್ಯಾಣಿ ಯೋ ಮೋಹಾದನುತಿಷ್ಠತಿ ।**
**ಸ ತೇಷಾಂ ವಿಪರಿಭ್ರಂಶಾದ್ ಭ್ರಂಶ್ಯತೇ ಜೀವಿತಾದಪಿ ॥ ೨೨ ॥**

ಮಾಡುತ್ತಾನೆಯೋ ಅಂತಹವನು ತಾನು ಮಾಡಿದ ಅಯುಕ್ತವಾದ ಕಾರ್ಯಗಳ ದುಷ್ಪರಿಣಾಮಗಳಿಂದಾಗಿ ತನ್ನ ಜೀವಿತವನ್ನೇ ಹಾಳುಮಾಡಿಕೊಳ್ಳುತ್ತಾನೆ. ॥ ೨೨ ॥

**ಕರ್ಮಣಾಂ ತು ಪ್ರಶಸ್ತಾನಾಮನುಷ್ಠಾನಂ ಸುಖಾವಹಮ್ ।**
**ತೇಷಾಮೇವಾನನುಷ್ಠಾನಂ ಪಶ್ಚಾತ್ತಾಪಕರಂ ಮತಮ್ ॥ ೨೩ ॥**

ಪ್ರಶಸ್ತವಾದ ಕರ್ಮಗಳ ಅನುಷ್ಠಾನವು ಸುಖಾವಹವಾದುದು. ಪ್ರಶಸ್ತವಾದ ಕರ್ಮಗಳನ್ನು ಅನುಷ್ಠಾನಮಾಡದಿರುವುದು ಪಶ್ಚಾತ್ತಾಪಕ್ಕೆ ಕಾರಣವಾಗುತ್ತದೆ. ॥ ೨೩ ॥

**ಅನಧೀತ್ಯ ಯಥಾ ವೇದಾನ್ನ ವಿಪ್ರಃ ಶ್ರಾದ್ಧಮರ್ಹತಿ ।**
**ಏವಮಶ್ರುತಷಾಡ್ಗುಣ್ಯೋ ನ ಮಂತ್ರಂ ಶ್ರೋತುಮರ್ಹತಿ ॥ ೨೪ ॥**

ಯಾವ ರೀತಿಯಲ್ಲಿ ವೇದಾಧ್ಯಯನ ಮಾಡದ ಬ್ರಾಹ್ಮಣನು ಶ್ರಾದ್ಧಕರ್ಮದಲ್ಲಿ ಅನರ್ಹನಾಗುವನೋ ಅದೇ ರೀತಿಯಲ್ಲಿ ಸಂಧಿ, ವಿಗ್ರಹ, ಯಾನ, ಆಸನ, ದ್ವೈಧೀಭಾವ ಮತ್ತು ಸಮಾಶ್ರಯಗಳೆಂಬ ಆರು ಗುಣಗಳನ್ನು ತಿಳಿಯದವನು ರಾಜನ ಮಂತ್ರಾಲೋಚನೆಯಲ್ಲಿ ಭಾಗವಹಿಸಲು ಅರ್ಹನಾಗುವುದಿಲ್ಲ. ॥ ೨೪ ॥

**ಸ್ಥಾನವೃದ್ಧಿಕ್ಷಯಜ್ಞಸ್ಯ ಷಾಡ್ಗುಣ್ಯವಿದಿತಾತ್ಮನಃ ।**
**ಅನವಜ್ಞಾತಶೀಲಸ್ಯ ಸ್ವಾಧೀನಾ ಪೃಥಿವೀ ನೃಪ ॥ ೨೫ ॥**

ರಾಜನೆ ! ಯಾರಿಗೆ ತನ್ನ ರಾಜ್ಯದ ಸ್ಥಿತಿ, ವೃದ್ಧಿ ಹಾಗೂ ಕ್ಷಯಗಳ ಬಗ್ಗೆ ಪೂರ್ಣ ಜ್ಞಾನವಿರುವುದೋ, ಯಾರು ಸಂಧಿ-ವಿಗ್ರಹಾದಿ ಆರು ಗುಣಗಳನ್ನೂ ಅರಿತಿರುವನೋ, ಸಕಲಜನರ ಪ್ರಶಂಸೆಗೂ ಪಾತ್ರವಾಗಬಹುದಾದ ಸೌಶೀಲ್ಯವನ್ನು ಯಾವ ರಾಜನು ಹೊಂದಿರುವನೋ ಅವನಿಗೆ ಅಖಂಡವಾದ ಪೃಥ್ವಿಯೇ ಸ್ವಾಧೀನವಾಗುತ್ತದೆ. ॥ ೨೫ ॥

**ಅಮೋಘಕ್ರೋಧಹರ್ಷಸ್ಯ ಸ್ವಯಂ ಕೃತ್ಯಾನ್ವವೇಕ್ಷಿಣಃ ।**
**ಆತ್ಮಪ್ರತ್ಯಯಕೋಶಸ್ಯ ವಸುಧೈವ ವಸುಂಧರಾ ॥ ೨೬ ॥**

ಯಾವನ ಕೋಪ ಮತ್ತು ಹರ್ಷಗಳು (ವ್ಯರ್ಥವಾಗುವುದಿಲ್ಲವೋ) ಪರಿಣಾಮಕಾರಿಯಾಗಿರುತ್ತದೆಯೋ, ಯಾವನು ಮುಖ್ಯವಾದ ಕಾರ್ಯಗಳನ್ನೆಲ್ಲ ಸ್ವತಃ ಪರೀಕ್ಷಿಸಿ ಮಾಡುವನೋ, ಯಾವನು ತನ್ನ ಬೊಕ್ಕಸದ ಪೂರ್ಣ (ಅಧಿಕಾರವನ್ನು) ಜ್ಞಾನವನ್ನು ಹೊಂದಿರುವನೋ ಅಂತಹವನಿಗೆ ವಸುಂಧರೆಯು ಸಕಲ ಐಶ್ವರ್ಯವನ್ನೂ ದಯಪಾಲಿಸುತ್ತಾಳೆ. ॥ ೨೬ ॥

**ನಾಮಮಾತ್ರೇಣ ತುಷ್ಯೇತ ಛತ್ರೇಣ ಚ ಮಹೀಪತಿಃ ।**
**ಭೃತ್ಯೇಭ್ಯೋ ವಿಸೃಜೇದರ್ಥಾನ್ನೈಕಃ ಸರ್ವಹರೋ ಭವೇತ್ ॥ ೨೭ ॥**

ಭೂಪತಿಯಾದವನು 'ರಾಜಾ' ಎಂಬ ನಾಮದಿಂದ ಹಾಗೂ ರಾಜೋಚಿತ ಶ್ವೇತಚ್ಛತ್ರದಿಂದಲೇ ಸಂತುಷ್ಟನಾಗಬೇಕು. ಸೇವಕರಿಗೆ ಯಥೇಚ್ಛವಾಗಿ ಧನ ನೀಡಬೇಕು, ಸಕಲೈಶ್ವರ್ಯಗಳನ್ನೂ ತಾನೊಬ್ಬನೇ ಉಪಭುಂಜಿಸಬಾರದು. ॥ ೨೭

**ಬ್ರಾಹ್ಮಣಂ ಬ್ರಾಹ್ಮಣೋ ವೇದ ಭರ್ತಾ ವೇದ ಸ್ತ್ರಿಯಂ ತಥಾ ।**
**ಅಮಾತ್ಯಂ ನೃಪತಿರ್ವೇದ ರಾಜಾ ರಾಜಾನಮೇವ ಚ ॥ ೨೮ ॥**

ಬ್ರಾಹ್ಮಣನನ್ನು ಬ್ರಾಹ್ಮಣನೇ ತಿಳಿದುಕೊಳ್ಳಬಲ್ಲ, ಸ್ತ್ರೀಯನ್ನು ಆಕೆಯ ಪತಿ ಅರಿಯಬಲ್ಲ, ಮಂತ್ರಿಯನ್ನು ರಾಜನು ಅರಿಯಬಲ್ಲ ಹಾಗೂ ರಾಜನಾದವ ರಾಜನೇ ಅರಿಯಬಲ್ಲ. ॥ ೨೮ ॥

**ನ ಶತ್ರುರ್ವಶಮಾಪನ್ನೋ ಮೋಕ್ತವ್ಯೋ ವಧ್ಯತಾಂ ಗತಃ ।**
**ನ್ಯಗ್ ಭೂತ್ವಾ ಪರ್ಯುಪಾಸೀತ ವಧ್ಯಂ ಹನ್ಯಾದ್ ಬಲೇ ಸತಿ ।**
**ಅಹತಾದ್ಧಿ ಭಯಂ ತಸ್ಮಾಜ್ಜಾಯತೇ ನಚಿರಾದಿವ ॥ ೨೯ ॥**

ಸೆರೆಸಿಕ್ಕಿದ ಮತ್ತು ವಧಾರ್ಹನಾದ ಶತ್ರುವನ್ನು ಖಂಡಿತವಾಗಿಯೂ ಬಿಡಬಾರ ತನ್ನ ಶತ್ರುವನ್ನು ವಧಿಸಲಾರದಷ್ಟು ದುರ್ಬಲನಾಗಿದ್ದರೆ – ಅತಿನಮ್ರನಾಗಿದ್ದುಕೊ ಬಲಸಂಗ್ರಹವನ್ನು ಮಾಡಿಕೊಂಡು – ಅನಂತರವಾದರೂ ಶತ್ರುವನ್ನು ಸಂಹರಿಸಲೇಬೇ ಏಕೆಂದರೆ ಶತ್ರುವಿನ ಸಂಹಾರವಾಗದಿದ್ದರೆ ಅವನಿಂದ ಅಪಾಯವೊದಗುವ ನಿಶ್ಚಿತ. ॥ ೨೯ ॥

**ದೈವತೇಷು ಪ್ರಯತ್ನೇನ ರಾಜಸು ಬ್ರಾಹ್ಮಣೇಷು ಚ ।**
**ನಿಯಂತವ್ಯಃ ಸದಾ ಕ್ರೋಧೋ ವೃದ್ಧಬಾಲಾತುರೇಷು ಚ ॥ ೩೦ ॥**

ದೇವತೆ, ರಾಜ, ಬ್ರಾಹ್ಮಣ, ವೃದ್ಧ, ಬಾಲಕ ಹಾಗೂ ರೋಗಿಗಳ ವಿಷಯ ಉಂಟಾಗಬಹುದಾದ ಕೋಪವನ್ನು ಪ್ರಯತ್ನಪೂರ್ವಕವಾಗಿ ತಡೆಹಿಡಿಯಬೇಕು. ॥ ೩೦

**ನಿರರ್ಥಂ ಕಲಹಂ ಪ್ರಾಜ್ಞೋ ವರ್ಜಯೇನ್ಮೂಢಸೇವಿತಮ್ ।**
**ಕೀರ್ತಿಂ ಚ ಲಭತೇ ಲೋಕೇ ನ ಚಾನರ್ಥೇನ ಯುಜ್ಯತೇ ॥ ೩೧ ॥**

ಪ್ರಾಜ್ಞನಾದವನು ವರ್ಜಿಸಬೇಕು. ಇದರಿಂದಾಗಿ ಅವನು ಲೋಕದಲ್ಲಿ ಕೀರ್ತಿವಂತನಾಗುವುದು ಮಾತ್ರವಲ್ಲದೆ ವ್ಯರ್ಥವಾದ ಕಲಹದಿಂದ ಆಗುವ ಅನರ್ಥಗಳಿಂದಲೂ ಪಾರಾಗುತ್ತಾನೆ. ॥ ೩೧ ॥

**ಪ್ರಸಾದೋ ನಿಷ್ಫಲೋ ಯಸ್ಯ ಕ್ರೋಧಶ್ಚಾಪಿ ನಿರರ್ಥಕಃ ।**
**ನ ತಂ ಭರ್ತಾರಮಿಚ್ಛಂತಿ ಷಂಢಂ ಪತಿಮಿವ ಸ್ತ್ರಿಯಃ ॥ ೩೨ ॥**

ಯಾರ ಅನುಗ್ರಹದಿಂದ ಯಾವ ಪ್ರಯೋಜನವೂ ಆಗುವುದಿಲ್ಲವೋ ಮತ್ತು ಯಾರ ಕೋಪವೂ ಸಹ ನಿರರ್ಥಕವಾಗುವುದೋ ಅಂತಹವನನ್ನು ರಾಜನನ್ನಾಗಿ ಅಂಗೀಕರಿಸಲು- ಷಂಡನಾದವನನ್ನು ಸ್ತ್ರೀಯರು ಪತಿಯನ್ನಾಗಿ ವರಿಸಲು ಇಚ್ಛಿಸದಂತೆ - ಪ್ರಜೆಗಳು ಇಚ್ಛಿಸುವುದಿಲ್ಲ. ॥ ೩೨ ॥

**ನ ಬುದ್ಧಿರ್ಧನಲಾಭಾಯ ನ ಜಾಡ್ಯಮಸಮೃದ್ಧಯೇ ।**
**ಲೋಕಪರ್ಯಾಯವೃತ್ತಾಂತಂ ಪ್ರಾಜ್ಞೋ ಜಾನಾತಿ ನೇತರಃ ॥ ೩೩ ॥**

ಬುದ್ಧಿಯು ಧನಪ್ರಾಪ್ತಿಗೆ ಹಾಗೂ ಮೂರ್ಖತೆಯು ದಾರಿದ್ರ್ಯಕ್ಕೆ ಕಾರಣವೆಂದೇನೂ ಇಲ್ಲ. ಲೋಕದ ವೈಪರೀತ್ಯದ ಕಾರಣವನ್ನು ಪ್ರಾಜ್ಞನು ಮಾತ್ರವೇ ತಿಳಿಯಲು ಸಾಧ್ಯ. ಬೇರೆಯವರಿಂದ ಅದು ತಿಳಿಯಲು ಸಾಧ್ಯವಿಲ್ಲ. ॥ ೩೩ ॥

**ವಿದ್ಯಾಶೀಲವಯೋವೃದ್ಧಾನ್ ಬುದ್ಧಿವೃದ್ಧಾಂಶ್ಚ ಭಾರತ ।**
**ಧನಾಭಿಜಾತವೃದ್ಧಾಂಶ್ಚ ನಿತ್ಯಂ ಮೂಢೋಽವಮನ್ಯತೇ ॥ ೩೪ ॥**

ಭಾರತ ! ಮೂರ್ಖನಾದ ಮನುಷ್ಯನು ವಿದ್ಯೆ, ಶೀಲ, ಅವಸ್ಥೆ ಬುದ್ಧಿ ಧನ ಹಾಗೂ ಕುಲದಿಂದ ಹಿರಿಯರಾದ ಎಲ್ಲರನ್ನೂ ಅನಾದರದಿಂದ ಕಾಣುತ್ತಾನೆ. ॥ ೩೪ ॥

**ಅನಾರ್ಯವೃತ್ತಮಪ್ರಾಜ್ಞಮಸೂಯಕಮಧಾರ್ಮಿಕಮ್ ।**
**ಅನರ್ಥಾಃ ಕ್ಷಿಪ್ರಮಾಯಾಂತಿ ವಾಗ್ದುಷ್ಟಂ ಕ್ರೋಧನಂ ತಥಾ ॥ ೩೫ ॥**

ಅಸದ್ವೃತ್ತಿಯಿರುವವನನ್ನೂ, ಮೂರ್ಖನನ್ನೂ, ಅಸೂಯಾಪರನನ್ನೂ, ಅಧಾರ್ಮಿಕನನ್ನೂ, ಕೆಟ್ಟ ಮಾತುಗಳನ್ನಾಡುವವನನ್ನೂ ಹಾಗೂ ಕೋಪಿಷ್ಠನನ್ನೂ ಅನರ್ಥಗಳು ಬಹು ಶೀಘ್ರವಾಗಿ ಆವರಿಸಿಕೊಳ್ಳುತ್ತವೆ. ॥ ೩೫ ॥

**ಅವಿಸಂವಾದನಂ ದಾನಂ ಸಮಯಸ್ಯಾವ್ಯತಿಕ್ರಮಃ ।**
**ಆವರ್ತಯಂತಿ ಭೂತಾನಿ ಸಮ್ಯಕ್‌ಪ್ರಣಿಹಿತಾ ಚ ವಾಕ್ ॥ ೩೬ ॥**

ಯಾವುದೇ ಮೋಸವಿಲ್ಲದೆ ಸತ್ಪಾತ್ರರಿಗೆ ದಾನ ಮಾಡುವುದು, ಮಾಡಿದ ಪ್ರತಿಜ್ಞೆಯನ್ನು ಯಾವ ಕಾರಣಕ್ಕೂ ಉಲ್ಲಂಘಿಸದಿರುವುದು, ಒಳ್ಳೆಯ ಶಬ್ದಗಳನ್ನು ಸೇರಿಸಿ ಸ್ಪಷ್ಟವಾಗಿ ಸಮಯೋಚಿತವಾಗಿ ಹೇಳುವ ಮಾತು - ಇವುಗಳು ಸಕಲ ಪ್ರಾಣಿಗಳನ್ನೂ ಸಹ ತನ್ನವರನ್ನಾಗಿಸಿಕೊಳ್ಳಲು ಸಹಕರಿಸುತ್ತವೆ. ॥ ೩೬ ॥

**ಅವಿಸಂವಾದಕೋ ದಕ್ಷಃ ಕೃತಜ್ಞೋ ಮತಿಮಾನೃಜುಃ।**
**ಅಪಿ ಸಂಕ್ಷೀಣಕೋಶೋऽಪಿ ಲಭತೇ ಪರಿವಾರಣಮ್ ॥ ೩೭ ॥**

ಬೇರೆಯವರನ್ನು ವಂಚಿಸದ, ದಕ್ಷನಾದ, ಕೃತಜ್ಞನಾದ, ಬುದ್ಧಿವಂತನಾದ, ನಿಷ್ಕಪಟನಾದ ರಾಜನು ಕಾರಣಾಂತರದಿಂದ ಕ್ಷೀಣವಾದ (ಬರಿದಾದ) ಖಜಾನೆಯನ್ನು ಹೊಂದಿದ್ದರೂ ಸಹ ಸಹಾಯಕರನ್ನು ಪಡೆಯುತ್ತಾನೆ. ॥ ೩೭ ॥

**ಧೃತಿಃ ಶಮೋ ದಮಃ ಶೌಚಂ ಕಾರುಣ್ಯಂ ವಾಗನಿಷ್ಠುರಾ।**
**ಮಿತ್ರಾಣಾಂ ಚಾನಭಿದ್ರೋಹಃ ಸಪ್ತೈತಾಃ ಸಮಿಧಃ ಶ್ರಿಯಃ ॥ ೩೮ ॥**

ಧೈರ್ಯ, ಮನೋನಿಗ್ರಹ, ಇಂದ್ರಿಯಸಂಯಮ, ಪವಿತ್ರತೆ, ದಯೆ, ಸುಮಧುರವಾದ ಮಾತು, ಮಿತ್ರರಿಗೆ ದ್ರೋಹಮಾಡದಿರುವುದು - ಈ ಏಳು ಅಂಶಗಳು ಸಂಪತ್ತೆಂಬ ಅಗ್ನಿಗೆ ಸಮಿತ್ತುಗಳ ರೂಪದಲ್ಲಿರುತ್ತವೆ. ॥ ೩೮ ॥

**ಅಸಂವಿಭಾಗೀ ದುಷ್ಟಾತ್ಮಾ ಕೃತಘ್ನೋ ನಿರಪತ್ರಪಃ।**
**ತಾದೃಙ್‌ನರಾಧಿಪೋ ಲೋಕೇ ವರ್ಜನೀಯೋ ನರಾಧಿಪ ॥ ೩೯ ॥**

ಮಹಾರಾಜ ! ತನ್ನನ್ನು ಆಶ್ರಯಿಸಿರುವವರಿಗೆ ಐಶ್ವರ್ಯವನ್ನು ಸರಿಯಾಗಿ ಹಂಚದವನೂ, ದುಷ್ಟ ಹೃದಯವುಳ್ಳವನೂ, ಕೃತಘ್ನನೂ, ನಾಚಿಕೆಗೆಟ್ಟವನೂ - ಆದ ರಾಜನು ಲೋಕದಲ್ಲಿ ವರ್ಜನೀಯನು. ॥ ೩೯ ॥

**ನ ಚ ರಾತ್ರೌ ಸುಖಂ ಶೇತೇ ಸಸರ್ಪ ಇವ ವೇಶ್ಮನಿ।**
**ಯಃ ಕೋಪಯತಿ ನಿರ್ದೋಷಂ ಸದೋಷೋऽಭ್ಯಂತರಂ ಜನಮ್ ॥ ೪೦ ॥**

ಯಾವನು, ತಾನು ದೋಷಪೂರಿತನಾಗಿದ್ದೂ ಸಹ ನಿರ್ದೋಷಿಗಳಾದ ಆತ್ಮೀಯರನ್ನು ಕೋಪಗೊಳ್ಳುವಂತೆ ಮಾಡುವನೋ ಅಂತಹವನು - ಸರ್ಪವಿರುವ ಮನೆಯಲ್ಲಿ ಹೇಗೆ ಸುಖವಾಗಿ ಮಲಗಲು ಸಾಧ್ಯವಿಲ್ಲವೋ - ಹಾಗೆ ರಾತ್ರಿಯಲ್ಲಿ ಸುಖವಾಗಿ ನಿದ್ರಿಸಲಾರನು. ॥ ೪೦ ॥

**ಯೇಷು ದುಷ್ಟೇಷು ದೋಷಃ ಸ್ಯಾದ್ ಯೋಗಕ್ಷೇಮಸ್ಯ ಭಾರತ।**

ಯಾರು ತನ್ನ ವಿಷಯದಲ್ಲಿ ದುಷ್ಟರಾದರೆ ತನ್ನ ಯೋಗಕ್ಷೇಮಕ್ಕೇ ಧಕ್ಕೆಯುಂಟಾಗುವುದೋ ಅಂತಹವರ ವಿಷಯದಲ್ಲಿ - ದೇವತೆಗಳ ವಿಷಯದಲ್ಲಿ ಹೇಗೋ ಹಾಗೆ ಭಯ ಭಕ್ತಿಗಳಿಂದ ನಡೆದುಕೊಳ್ಳಬೇಕು. ॥ ೪೧ ॥

**ಯೇಽರ್ಥಾಃ ಸ್ತ್ರೀಷು ಸಮಾಯುಕ್ತಾಃ ಪ್ರಮತ್ತಪತಿತೇಷು ಚ ।**
**ಯೇ ಚಾನಾರ್ಯೇ ಸಮಾಸಕ್ತಾಃ ಸರ್ವೇ ತೇ ಸಂಶಯಂ ಗತಾಃ ॥ ೪೨ ॥**

ಸ್ತ್ರೀಯರಲ್ಲಿ, ಪ್ರಮತ್ತರಲ್ಲಿ, ಜಾತಿಭ್ರಷ್ಟರಾದವರಲ್ಲಿ ಮತ್ತು ನೀಚಪುರುಷರಲ್ಲಿ ಐಶ್ವರ್ಯವು ಸೇರಿದ್ದೇ ಆದರೆ ಅದು ಬೆಳವಣಿಗೆ ಹೊಂದುವುದು ಸಂಶಯಾಸ್ಪದ. ॥ ೪೨ ॥

**ಯತ್ರ ಸ್ತ್ರೀ ಯತ್ರ ಕಿತವೋ ಬಾಲೋ ಯತ್ರಾನುಶಾಸಿತಾ ।**
**ಮಜ್ಜಂತಿ ತೇಽವಶಾ ರಾಜನ್ ನದ್ಯಾಮಶ್ಮಪ್ಲವಾ ಇವ ॥ ೪೩ ॥**

ಯಾವ ರಾಜ್ಯವು ಸ್ತ್ರೀ ಅಥವಾ ಜೂಜುಕೋರ ಅಥವಾ ಬಾಲಕನಿಂದ ಆಳಲ್ಪಡುತ್ತದೆಯೋ ಆ ರಾಜ್ಯದ ಜನರು - ನದಿಯಲ್ಲಿ ಕಲ್ಲಿನ ದೋಣಿಯು ಒಡನೆಯೇ ಮುಳುಗಿ ಹೋಗುವಂತೆ - ಪ್ರಜ್ಞಾಹೀನರಾಗಿ ವಿಪತ್ತೆಂಬ ಸಾಗರದಲ್ಲಿ ಮುಳುಗಿಹೋಗುತ್ತಾರೆ. ॥ ೪೩ ॥

**ಪ್ರಯೋಜನೇಷು ಯೇ ಸಕ್ತಾ ನ ವಿಶೇಷೇಷು ಭಾರತ ।**
**ತಾನಹಂ ಪಂಡಿತಾನ್ ಮನ್ಯೇ ವಿಶೇಷಾ ಹಿ ಪ್ರಸಂಗಿನಃ ॥ ೪೪ ॥**

ತಮಗೆ ಸಂಬಂಧಿಸಿದ ಕಾರ್ಯಗಳಲ್ಲಿಯೇ ಆಸಕ್ತರಾಗಿದ್ದು ಇತರ ವಿಷಯಗಳಲ್ಲಿ ತಲೆಹಾಕದೆ ಇರುವವರನ್ನು ನಾನು ಪಂಡಿತರೆಂದು ಭಾವಿಸುತ್ತೇನೆ. ತಮಗೆ ಪ್ರಯೋಜನವಿಲ್ಲದ ಅಥವಾ ಸಂಬಂಧಿಸದ ಕಾರ್ಯಗಳಲ್ಲಿ ಪ್ರವೃತ್ತರಾಗುವವರು ಅಧಿಕಪ್ರಸಂಗಿಗಳೇ ಸರಿ. ॥ ೪೪ ॥

**ಯಂ ಪ್ರಶಂಸಂತಿ ಕಿತವಾ ಯಂ ಪ್ರಶಂಸಂತಿ ಚಾರಣಾಃ ।**
**ಯಂ ಪ್ರಶಂಸಂತಿ ಬಂಧಕ್ಯೋ ನ ಸ ಜೀವತಿ ಮಾನವಃ ॥ ೪೫ ॥**

ಜೂಜುಕಾರರು ಯಾರನ್ನು ಪ್ರಶಂಸೆ ಮಾಡುವರೋ, ನರ್ತಕರು ಯಾರನ್ನು ಪ್ರಶಂಸೆ ಮಾಡುವರೋ, ವೇಶ್ಯೆಯರು ಯಾರನ್ನು ಪ್ರಶಂಸೆ ಮಾಡುವರೋ ಅಂತಹವನು ಜೀವಿಸಿದ್ದರೂ ಸತ್ತಂತೆಯೇ ಸರಿ. ॥ ೪೫ ॥

**ಹಿತ್ವಾ ತಾನ್ ಪರಮೇಷ್ವಾಸಾನ್ ಪಾಂಡವಾನಮಿತೌಜಸಃ ।**
**ಆಹಿತಂ ಭಾರತೈಶ್ವರ್ಯಂ ತ್ವಯಾ ದುರ್ಯೋಧನೇ ಮಹತ್ ॥ ೪೬ ॥**

ಮಹಾಧನುರ್ಧಾರಿಗಳಾದ, ಅಮಿತೌಜಸ್ಕರಾದ ಪಾಂಡವರನ್ನು ಬಿಟ್ಟು ಭಾರತವಂಶಕ್ಕೆ ಸಂಬಂಧಿಸಿದ ಮತ್ತು ಮಹತ್ತರವಾದ ಈ ರಾಜ್ಯೈಶ್ವರ್ಯವು ದುರ್ಯೋಧನನ ಮೇಲೆ ನಿನ್ನಿಂದ ಹೊರಿಸಲ್ಪಟ್ಟಿದೆ. ॥ ೪೬ ॥

**ತಂ ದ್ರಕ್ಷ್ಯಸಿ ಪರಿಭ್ರಷ್ಟಂ ತಸ್ಮಾತ್ ತ್ವಮಚಿರಾದಿವ ।**
**ಐಶ್ವರ್ಯಮದಸಮ್ಮೂಢಂ ಬಲಿಂ ಲೋಕತ್ರಯಾದಿವ ॥ ೪೭ ॥**

ಬಲಿಚಕ್ರವರ್ತಿಯು ಮೂರುಲೋಕಗಳಿಂದಲೂ ಪ್ರರಿಭ್ರಷ್ಟನಾದಂತೆ – ಐಶ್ವರ್ಯ-ಮದದಿಂದ ವಿಮೋಹಿತನಾಗಿರುವ ನಿನ್ನ ಮಗನು ನೀನು ಹೊರಿಸಿರುವ ಮಹತ್ತರವಾದ ಈ ರಾಜ್ಯೈಶ್ವರ್ಯದಿಂದ ಅತ್ಯಲ್ಪಕಾಲದಲ್ಲಿಯೇ ಪರಿಭ್ರಷ್ಟನಾಗುವುದನ್ನು ನೀನೇ ಕಾಣುವೆ. ॥ ೪೭ ॥

ಇತಿ ಶ್ರೀಮಹಾಭಾರತೇ ಉದ್ಯೋಗಪರ್ವಣಿ ಪ್ರಜಾಗರಪರ್ವಣಿ
ವಿದುರವಾಕ್ಯೇ ಅಷ್ಟಾತ್ರಿಂಶೋಽಧ್ಯಾಯಃ ॥ ೩೮ ॥



# ಏಳನೇ ಅಧ್ಯಾಯ

## ಧೃತರಾಷ್ಟ್ರ ಉವಾಚ

ಅನೀಶ್ವರೋಽಯಂ ಪುರುಷೋ ಭವಾಭವೇ
ಸೂತ್ರಪ್ರೋತಾ ದಾರುಮಯೀವ ಯೋಷಾ ।
ಧಾತ್ರಾ ತು ದಿಷ್ಟಸ್ಯ ವಶೇ ಕೃತೋಽಯಂ
ತಸ್ಮಾದ್ ವದ ತ್ವಂ ಶ್ರವಣೇ ಧೃತೋಽಹಮ್ ॥ ೧ ॥

**ಧೃತರಾಷ್ಟ್ರನು ಹೇಳಿದನು** - ವಿದುರ ! ಮಾನವನು ಐಶ್ವರ್ಯದ ಪ್ರಾಪ್ತಿಗಾಗಲೀ, ವಿನಾಶಕ್ಕಾಗಲೀ ಕಾರಣನಾಗುವುದಿಲ್ಲ. ದಾರದಿಂದ ಕಟ್ಟಲ್ಪಟ್ಟ ಮರದ ಹೆಣ್ಣುಗೊಂಬೆಯೊಂದು ಸೂತ್ರಧಾರನು ಆಡಿಸಿದಂತೆ ಕುಣಿಯುವ ರೀತಿಯಲ್ಲಿ - ಪುರುಷನು ಬ್ರಹ್ಮನ ಶಾಸನಕ್ಕೆ ಅಧೀನನಾಗಿರುತ್ತಾನೆ. ಆದುದರಿಂದ ನೀನು ಹೇಳುತ್ತಾ ಹೋಗು, ನಾನು ಧೈರ್ಯವಾಗಿ ಕುಳಿತು ಕೇಳುವೆ. ॥ ೧ ॥

## ವಿದುರ ಉವಾಚ

ಅಪ್ರಾಪ್ತಕಾಲಂ ವಚನಂ ಬೃಹಸ್ಪತಿರಪಿ ಬ್ರುವನ್ ।
ಲಭತೇ ಬುದ್ಧ್ಯವಜ್ಞಾನಮವಮಾನಂ ಚ ಭಾರತ ॥ ೨ ॥

**ವಿದುರನು ಹೇಳಿದನು** - ಭಾರತ ! ಕಾಲವು ವಿಪರೀತವಾಗಿ ಪರಿಣಮಿಸಿದಾಗ ಸಮಯಕ್ಕೆ ತಕ್ಕುದಲ್ಲದ ಮಾತನ್ನು ಸಾಕ್ಷಾತ್ ಬೃಹಸ್ಪತಿಯೇ ಉಪದೇಶ ಮಾಡುತ್ತಿದ್ದರೂ ಸಹ ಅವನು ಅವಮಾನಿತನಾಗುತ್ತಾನೆ. ಬುದ್ಧಿಶೂನ್ಯನೆಂಬ ಅಪವಾದವನ್ನು ಹೊಂದುತ್ತಾನೆ. ॥ ೨ ॥

ಪ್ರಿಯೋ ಭವತಿ ದಾನೇನ ಪ್ರಿಯವಾದೇನ ಚಾಪರಃ ।
ಮಂತ್ರಮೂಲಬಲೇನಾನ್ಯೋ ಯಃ ಪ್ರಿಯಃ ಪ್ರಿಯ ಏವ ಸಃ ॥ ೩ ॥

ಪ್ರಪಂಚದಲ್ಲಿ ಒಬ್ಬ ದಾನ ಮಾಡುವುದರಿಂದ ಪ್ರಿಯನಾಗುತ್ತಾನೆ, ಮತ್ತೊಬ್ಬನು ಪ್ರಿಯವಾದ ಮಾತನ್ನಾಡುವುದರಿಂದ ಪ್ರಿಯವಾಗುತ್ತಾನೆ. ಮೂರನೆಯವನು ಮಂತ್ರ ಹಾಗೂ ಔಷಧಿಗಳ ಬಲದಿಂದಾಗಿ ಪ್ರಿಯನಾಗುತ್ತಾನೆ. ಆದರೆ ಸ್ವಾಭಾವಿಕವಾಗಿ ಯಾರು ಪ್ರಿಯನಾಗಿರುತ್ತಾನೆಯೋ ಅವನೇ ನಿಜವಾದ ಪ್ರಿಯನು. ॥ ೩ ॥

ದ್ವೇಷ್ಯೋ ನ ಸಾಧುರ್ಭವತಿ ನ ಮೇಧಾವೀ ನ ಪಂಡಿತಃ ।
ಪ್ರಿಯೇ ಶುಭಾನಿ ಕಾರ್ಯಾಣಿ ದ್ವೇಷ್ಯೇ ಪಾಪಾನಿ ಚೈವ ಹ ॥ ೪ ॥

ಯಾರ ಬಗ್ಗೆ ದ್ವೇಷವಿರುತ್ತದೆಯೋ, ಆತನು ಸಾಧು, ಮೇಧಾವಿ ಅಥವಾ ಪಂಡಿತನೇ ಆಗಿದ್ದರೂ ಹಾಗೆಂದು ಭಾವಿಸುವುದಿಲ್ಲ. ಪ್ರಿಯರಾದವರು ಮಾಡುವ ಎಲ್ಲ ಕಾರ್ಯಗಳೂ ಶುಭಕಾರ್ಯಗಳೆಂದೂ, ಶತ್ರುವು ಮಾಡುವ ಕಾರ್ಯಗಳೆಲ್ಲವೂ ಪಾಪಕಾರ್ಯಗಳೆಂದೇ ಕಂಡುಬರುತ್ತದೆ. ॥ ೪ ॥

**ಉಕ್ತಂ ಮಯಾ ಜಾತಮಾತ್ರೇಽಪಿ ರಾಜನ್**
**ದುರ್ಯೋಧನಂ ತ್ಯಜ ಪುತ್ರಂ ತ್ವಮೇಕಮ್ ।**
**ತಸ್ಯ ತ್ಯಾಗಾತ್ ಪುತ್ರಶತಸ್ಯ ವೃದ್ಧಿ-**
**ರಸ್ಯಾತ್ಯಾಗಾತ್ ಪುತ್ರಶತಸ್ಯ ನಾಶಃ ॥ ೫ ॥**

ಹುಟ್ಟಿದೊಡನೆಯೇ ನಾನು ಈ ಒಬ್ಬ ಮಗ ದುರ್ಯೋಧನನನ್ನು ಪರಿತ್ಯಜಿಸೆಂದು ಹೇಳಿದ್ದೆನು. ಅವನನ್ನು ತ್ಯಜಿಸುವುದರಿಂದ ಉಳಿದ ನೂರುಮಕ್ಕಳ ವೃದ್ಧಿ ಉಂಟಾಗುವುದೆಂದೂ, ತ್ಯಜಿಸದಿದ್ದಲ್ಲಿ ನೂರು ಮಕ್ಕಳ ವಿನಾಶವು ಉಂಟಾಗುವುದೆಂದೂ ಸ್ಪಷ್ಟವಾಗಿಯೇ ಹೇಳಿದ್ದೆನು. ॥ ೫ ॥

**ನ ವೃದ್ಧಿರ್ಬಹು ಮಂತವ್ಯಾ ಯಾ ವೃದ್ಧಿಃ ಕ್ಷಯಮಾವಹೇತ್ ।**
**ಕ್ಷಯೋಽಪಿ ಬಹು ಮಂತವ್ಯೋ ಯಃ ಕ್ಷಯೋ ವೃದ್ಧಿಮಾವಹೇತ್ ॥ ೬ ॥**

ತಾತ್ಕಾಲಿಕವಾದ ಯಾವ ಅಭ್ಯುದಯವು ಭವಿಷ್ಯದಲ್ಲಿ ವಿನಾಶಕ್ಕೆ ಕಾರಣವಾಗುವುದೋ ಅಂತಹ ಅಭ್ಯುದಯಕ್ಕೆ ಮಹತ್ತ್ವವನ್ನು ಕೊಡಬಾರದು ಮತ್ತು ತಾತ್ಕಾಲಿಕವಾದ ಯಾವ ಅವನತಿಯು ಭವಿಷ್ಯದಲ್ಲಿ ಅಭ್ಯುದಯವನ್ನೇ ಉಂಟು ಮಾಡುವುದೋ ಅಂತಹ ಅವನತಿಗಾದರೂ ಮಹತ್ತ್ವವನ್ನು ಕೊಡಬೇಕಾಗುತ್ತದೆ. ॥ ೬ ॥

**ನ ಸ ಕ್ಷಯೋ ಮಹಾರಾಜ ಯಃ ಕ್ಷಯೋ ವೃದ್ಧಿಮಾವಹೇತ್ ।**
**ಕ್ಷಯಃ ಸ ತ್ವಿಹ ಮಂತವ್ಯೋ ಯಂ ಲಬ್ಧ್ವಾ ಬಹು ನಾಶಯೇತ್ ॥ ೭ ॥**

ಮಹಾರಾಜ ! ಯಾವ ಕ್ಷಯದಿಂದ ವೃದ್ಧಿಯುಂಟಾಗುವುದೋ ಅಂತಹ ಕ್ಷಯವು ಕ್ಷಯವೆಂದು ಪರಿಗಣಿಸಲ್ಪಡುವುದಿಲ್ಲ. ಆದರೆ ಯಾವ ವಸ್ತುವಿನ ಲಾಭದಿಂದ ಮುಂದೆ ಸರ್ವನಾಶ ಉಂಟಾಗುವುದೋ ಅಂತಹ ವಸ್ತುವಿನ ಲಾಭವನ್ನು ಕ್ಷಯವೆಂದೇ ಭಾವಿಸಬೇಕು. ॥ ೭ ॥

**ಸಮೃದ್ಧಾ ಗುಣತಃ ಕೇಚಿದ್ ಭವಂತಿ ಧನತೋಽಪರೇ ।**

ಧೃತರಾಷ್ಟ್ರ ! ಕೆಲವರು ಗುಣಸಮೃದ್ಧಿಯುಳ್ಳವರು. ಕೆಲವರು ಧನಸಂಪನ್ನರು. ಧನಸಮೃದ್ಧಿಯನ್ನು ಹೊಂದಿ ಸದ್ಗುಣಗಳಿಂದ ವಿಹೀನರಾಗಿದ್ದರೆ ಅಂತಹವರನ್ನು ನೀನು ಪರಿತ್ಯಜಿಸಬೇಕು. ॥ ೮ ॥

**ಧೃತರಾಷ್ಟ್ರ ಉವಾಚ**

**ಸರ್ವಂ ತ್ವಮಾಯತೀಯುಕ್ತಂ ಭಾಷಸೇ ಪ್ರಾಜ್ಞಸಮ್ಮತಮ್ ।**
**ನ ಚೋತ್ಸಹೇ ಸುತಂ ತ್ಯಕ್ತುಂ ಯತೋ ಧರ್ಮಸ್ತತೋ ಜಯಃ ॥ ೯ ॥**

**ಧೃತರಾಷ್ಟ್ರನು ಹೇಳಿದನು** - ವಿದುರ ! ನೀನು ಪರಿಣಾಮದಲ್ಲಿ ಹಿತವುಂಟಾಗತಕ್ಕ ಮಾತುಗಳನ್ನೇ ಹೇಳುತ್ತಿರುವೆ. ಪ್ರಾಜ್ಞರು ಸಮ್ಮತಿಸುವ ಮಾತುಗಳನ್ನೇ ಆಡಿರುವೆ. ಆದರೆ ನಿನ್ನ ಅಭಿಪ್ರಾಯದಂತೆ ಮಗನನ್ನು ಪರಿತ್ಯಜಿಸುವ ಉತ್ಸಾಹವು ಮಾತ್ರ ನನಗಿಲ್ಲ. ಎಲ್ಲಿ ಧರ್ಮವಿರುವುದೋ ಅಲ್ಲಿ ಜಯವಿದೆ ಎಂಬುದು ಸತ್ಯ. ॥ ೯ ॥

**ವಿದುರ ಉವಾಚ**

**ಅತೀವಗುಣಸಂಪನ್ನೋ ನ ಜಾತು ವಿನಯಾನ್ವಿತಃ ।**
**ಸುಸೂಕ್ಷ್ಮಮಪಿ ಭೂತಾನಾಮುಪಮರ್ದಮುಪೇಕ್ಷತೇ ॥ ೧೦ ॥**

**ವಿದುರನು ಹೇಳಿದನು** - ಬಹುಗುಣಸಂಪನ್ನನಾದವನು ಹಾಗೂ ವಿನಯಶೀಲನಾದವನು ಪ್ರಾಣಿಗಳಿಗಾಗುವ ಅತ್ಯಲ್ಪವಾದ ಹಿಂಸೆಯನ್ನೂ ಸಹ ಉಪೇಕ್ಷಿಸಲಾರನು. ॥ ೧೦ ॥

**ಪರಾಪವಾದನಿರತಾಃ ಪರದುಃಖೋದಯೇಷು ಚ ।**
**ಪರಸ್ಪರವಿರೋಧೇ ಚ ಯತಂತೇ ಸತತೋತ್ಥಿತಾಃ ॥ ೧೧ ॥**
**ಸದೋಷಂ ದರ್ಶನಂ ಯೇಷಾಂ ಸಂವಾಸೇ ಸುಮಹದ್ ಭಯಮ್ ।**
**ಅರ್ಥಾದಾನೇ ಮಹಾನ್ ದೋಷಃ ಪ್ರದಾನೇ ಚ ಮಹದ್ ಭಯಮ್ ॥ ೧೨ ॥**

ಕೆಲವರು ಯಾವಾಗಲೂ ಪರನಿಂದೆಯಲ್ಲೇ ನಿರತರಾಗಿರುತ್ತಾರೆ. ಇತರರಿಗೆ ಕಷ್ಟಕೊಡುವುದರಲ್ಲಿ, ಪರಸ್ಪರರಲ್ಲಿ ದ್ವೇಷಭಾವನೆಯನ್ನು ಹುಟ್ಟಿಸುವುದರಲ್ಲಿ ನಿರತರಾಗಿರುತ್ತಾರೆ. ಇಂತಹವರ ದರ್ಶನವು ದೋಷಾವಹವಾದುದು. ಇಂತಹವರ ಸಹವಾಸವೂ ಅಪಾಯಕರವಾದುದು. ಇಂತಹವರಿಂದ ಹಣವನ್ನು ಪಡೆಯುವುದೂ ದೋಷಾವಹವಾದುದು. ಇಂತಹವರಿಗೆ ಹಣಕೊಡುವುದೂ ಮಹತ್ತರವಾದ ಭಯಕ್ಕೆ ಕಾರಣವಾಗುತ್ತದೆ. ॥ ೧೧-೧೨ ॥

**ಯೇ ವೈ ಭೇದನಶೀಲಾಸ್ತು ಸಕಾಮಾ ನಿಸ್ತ್ರಪಾಃ ಶಠಾಃ ।**
**ಯೇ ಪಾಪಾ ಇತಿ ವಿಖ್ಯಾತಾಃ ಸಂವಾಸೇ ಪರಿಗರ್ಹಿತಾಃ ॥ ೧೩ ॥**

ಯಾರು ಒಡಕನ್ನುಂಟುಮಾಡುವರೋ, ಆಸೆಬುರುಕರೋ, ನಾಚಿಕೆಗೆಟ್ಟವರೋ, ಮೂರ್ಖರೋ, ಮಹಾಪಾಪಿಷ್ಠರೆಂದು ವಿಖ್ಯಾತರಾಗಿರುವರೋ – ಅಂತಹವರು ಸಹವಾಸಕ್ಕೆ ಅನರ್ಹರು. ॥ ೧೩ ॥

**ಯುಕ್ತಾಂಶ್ಚಾನ್ಯೈರ್ಮಹಾದೋಷೈರ್ಯೇ ನರಾಸ್ತಾನ್ ವಿವರ್ಜಯೇತ್ ।**
**ನಿವರ್ತಮಾನೇ ಸೌಹಾರ್ದೇ ಪ್ರೀತಿರ್ನೀಚೇ ಪ್ರಣಶ್ಯತಿ ॥ ೧೪ ॥**
**ಯಾ ಚೈವ ಫಲನಿರ್ವೃತ್ತಿಃ ಸೌಹೃದೇ ಚೈವ ಯತ್ ಸುಖಮ್ ।**

ಮೇಲೆ ಹೇಳಿದ ದೋಷಗಳಿಂದ ಕೂಡಿರುವ ಮತ್ತು ಇನ್ನಿತರ ದೋಷಗಳಿಂದಲೂ ಕೂಡಿರುವ ನೀಚರನ್ನು ಪರಿತ್ಯಜಿಸಬೇಕು. ನೀಚಪುರುಷನೊಡನೆ ಇದ್ದ ಸೌಹಾರ್ದವು ಕಡಿದುಹೋದೊಡನೆ ಪ್ರೀತಿಯೂ ನಶಿಸಿಹೋಗುತ್ತದೆ. ಇದರಿಂದಾಗಿ ನೀಚಸಹವಾಸದ ದುಷ್ಫಲದ ನಿವೃತ್ತಿಯೂ ಸೌಹಾರ್ದದಿಂದ ಪ್ರಾಪ್ತವಾಗಬಹುದಾದ ಯತ್ಕಿಂಚಿತ್ ಸುಖವೂ ತಪ್ಪುತ್ತದೆ. ॥ ೧೪-೧/೨ ॥

**ಯತತೆ ಚಾಪವಾದಾಯ ಯತ್ನಮಾರಭತೇ ಕ್ಷಯೇ ॥ ೧೫ ॥**
**ಅಲ್ಪೇಽಪ್ಯಪಕೃತೇ ಮೋಹಾನ್ನ ಶಾಂತಿಮಧಿಗಚ್ಛತಿ ।**

ಸ್ನೇಹವು ಕಡಿದನಂತರ ನೀಚಪುರುಷನು ಇಲ್ಲ ಸಲ್ಲದ ಅಪವಾದಗಳನ್ನು ಹೊರಿಸಲು ಯತ್ನಿಸುತ್ತಾನೆ. ಅಲ್ಪಾಪರಾಧವನ್ನೂ ದೊಡ್ಡದನ್ನಾಗಿ ಪರಿಗಣಿಸಿ ಗೆಳೆಯನ ವಿನಾಶಕ್ಕಾಗಿಯೇ ಪ್ರಯತ್ನಿಸುತ್ತಾನೆ. ಈ ದ್ವೇಷಬುದ್ಧಿಯಿಂದಾಗಿ ಅವನು ಶಾಂತಿಯೆಂಬುದನ್ನೇ ಪಡೆಯಲಾರನು. ॥ ೧೫-೧/೨ ॥

**ತಾದೃಶೈಃ ಸಂಗತಂ ನೀಚೈರ್ನೃಶಂಸೈರಕೃತಾತ್ಮಭಿಃ ॥ ೧೬ ॥**
**ನಿಶಮ್ಯ ನಿಪುಣಂ ಬುದ್ಧ್ಯಾ ವಿದ್ವಾನ್ ದೂರಾದ್ ವಿವರ್ಜಯೇತ್ ।**

ಈ ರೀತಿಯ ನೀಚರಾದ, ಕ್ರೂರಿಗಳಾದ ಹಾಗೂ ಅಜಿತೇಂದ್ರಿಯರಾದ (ಇಂದ್ರಿಯಪರವಶರಾದ) ಮನುಷ್ಯರೊಂದಿಗೆ ಉಂಟಾಗಬಹುದಾದ ಸಹವಾಸವನ್ನು – ವಿವೇಕಿಯಾದವನು ತನ್ನ ಬುದ್ಧಿಯಿಂದ ವಿವೇಚಿಸಿ – ದೂರದಿಂದಲೇ ಬಿಟ್ಟುಬಿಡಬೇಕು. ।೧೬-೧/೨।

**ಯೋ ಜ್ಞಾತಿಮನುಗೃಹ್ಣಾತಿ ದರಿದ್ರಂ ದೀನಮಾತುರಮ್ ॥ ೧೭ ॥**

ಯಾರು ತನ್ನ ದಾಯಾದಿಯನ್ನೂ, ದರಿದ್ರನನ್ನೂ, ದೀನ ಹಾಗೂ ರೋಗಿಯನ್ನೂ ಅನುಗ್ರಹಿಸುತ್ತಾನೆಯೋ ಆತನು ಪುತ್ರಸಮೃದ್ಧಿಯನ್ನೂ, ಪಶುಸಮೃದ್ಧಿಯನ್ನೂ ಪಡೆಯುವುದಲ್ಲದೇ ಅನಂತವಾದ ಕಲ್ಯಾಣವನ್ನೂ, ಸುಖವನ್ನೂ ಅನುಭವಿಸುತ್ತಾನೆ. ॥ ೧೭-½ ॥

**ಜ್ಞಾತಯೋ ವರ್ಧನೀಯಾಸ್ತೈರ್ಯ ಇಚ್ಛಂತ್ಯಾತ್ಮನಃ ಶುಭಮ್ ॥ ೧೮ ॥**
**ಕುಲವೃದ್ಧಿಂ ಚ ರಾಜೇಂದ್ರ ತಸ್ಮಾತ್ ಸಾಧು ಸಮಾಚರ ।**

ಯಾರು ತಮ್ಮ ಶುಭೋದಯವನ್ನು ಆಶಿಸುತ್ತಾರೆಯೋ ಮತ್ತು ಕುಲದ ಅಭಿವೃದ್ಧಿಯನ್ನು ಅಪೇಕ್ಷಿಸುತ್ತಾರೆಯೋ ಅವರು ತಮ್ಮ ದಾಯಾದರನ್ನೂ ಸಹ ಅಭಿವೃದ್ಧಿಗೆ ತರಬೇಕು. ಆದುದರಿಂದ ಧೃತರಾಷ್ಟ್ರ ! ಒಳ್ಳೆಯ ಕೆಲಸವನ್ನು ಮಾಡು. ॥ ೧೮-½ ॥

**ಶ್ರೇಯಸಾ ಯೋಕ್ಷ್ಯತೇ ರಾಜನ್ ಕುರ್ವಾಣೋ ಜ್ಞಾತಿಸತ್ಕ್ರಿಯಾಮ್ ॥ ೧೯ ॥**

ತನ್ನ ಬಂಧುಗಳನ್ನು ಯಾವನು ಸತ್ಕರಿಸುವನೋ ಅವನು ಶ್ರೇಯಸ್ಸನ್ನು ಪಡೆಯುತ್ತಾನೆ. ॥ ೧೯ ॥

**ವಿಗುಣಾ ಹ್ಯಪಿ ಸಂರಕ್ಷ್ಯಾ ಜ್ಞಾತಯೋ ಭರತರ್ಷಭ ।**
**ಕಿಂ ಪುನರ್ಗುಣವಂತಸ್ತೇ ತ್ವತ್ಪ್ರಸಾದಾಭಿಕಾಂಕ್ಷಿಣಃ ॥ ೨೦ ॥**

ಭರತಶ್ರೇಷ್ಠ ! ನಿನ್ನ ಕುಟುಂಬದ ಜನರು ಗುಣಹೀನರಾಗಿದ್ದರೂ ಸಹ ಅವರನ್ನು ಸಂರಕ್ಷಿಸುವುದು ಕರ್ತವ್ಯವಾಗಿರುತ್ತದೆ. ಹೀಗಿರುವಾಗ ಗುಣವಂತರಾದ, ನಿನ್ನ ಅನುಗ್ರಹವನ್ನು ಬಯಸುವವರ ವಿಷಯದಲ್ಲಿ ಹೇಳುವುದೇನಿದೆ ? ॥ ೨೦ ॥

**ಪ್ರಸಾದಂ ಕುರು ವೀರಾಣಾಂ ಪಾಂಡವಾನಾಂ ವಿಶಾಂಪತೇ ।**
**ದೀಯಂತಾಂ ಗ್ರಾಮಕಾಃ ಕೇಚಿತ್ ತೇಷಾಂ ವೃತ್ತ್ಯರ್ಥಮೀಶ್ವರ ॥ ೨೧ ॥**

ಮಹಾರಾಜ ! ವೀರರಾದ ಪಾಂಡವರ ವಿಷಯದಲ್ಲಿ ಅನುಗ್ರಹಬುದ್ಧಿಯುಳ್ಳವನಾಗು. ಅವರ ಜೀವಿಕೆಗಾಗಿ ಕೆಲವು ಗ್ರಾಮಗಳನ್ನಾದರೂ ಕೊಡುವಂತಹವನಾಗು. ॥ ೨೧ ॥

**ಏವಂ ಲೋಕೇ ಯಶಃ ಪ್ರಾಪ್ತಂ ಭವಿಷ್ಯತಿ ನರಾಧಿಪ ।**
**ವೃದ್ಧೇನ ಹಿ ತ್ವಯಾ ಕಾರ್ಯಂ ಪುತ್ರಾಣಾಂ ತಾತ ಶಾಸನಮ್ ॥ ೨೨ ॥**

ನರಾಧಿಪ ! ಹೀಗೆ ಮಾಡುವುದರಿಂದ ನಿನಗೆ ಶಾಶ್ವತವಾದ ಯಶಸ್ಸು ಲಭಿಸುತ್ತದೆ. ವೃದ್ಧನಾದ ನೀನು ಹೀಗೆಯೇ ಮಾಡಬೇಕೆಂಬುದಾಗಿ ನಿನ್ನ ಮಕ್ಕಳನ್ನು ಆಜ್ಞಾಪಿಸಬೇಕು. ॥ ೨೨ ॥

**ಮಯಾ ಚಾಪಿ ಹಿತಂ ವಾಚ್ಯಂ ವಿದ್ಧಿ ಮಾಂ ತ್ವದ್ಧಿತೈಷಿಣಮ್ ।**
**ಜ್ಞಾತಿಭಿರ್ವಿಗ್ರಹಸ್ತಾತ ನ ಕರ್ತವ್ಯಃ ಶುಭಾರ್ಥಿನಾ ।**
**ಸುಖಾನಿ ಸಹ ಭೋಜ್ಯಾನಿ ಜ್ಞಾತಿಭಿರ್ಭರತರ್ಷಭ ॥ ೨೩ ॥**

ನಿನಗೆ ಹಿತವಾದುದನ್ನೇ ಹೇಳುವುದು ನನ್ನ ಕರ್ತವ್ಯವೂ ಆಗಿರುತ್ತದೆ. ನನ್ನನ್ನು ನಿನ್ನ ಹಿತೈಷಿಯೆಂದು ಭಾವಿಸು. ಶುಭಾರ್ಥಿಯಾದವನು ಬಂಧುಗಳೊಂದಿಗೆ ದ್ವೇಷ ಕಟ್ಟಿಕೊಳ್ಳಬಾರದು. ಅವರನ್ನೂ ಜೊತೆಯಲ್ಲಿ ಸೇರಿಸಿಕೊಂಡು ಸುಖೋಪಭೋಗಗಳನ್ನು ಅನುಭವಿಸಬೇಕು. ॥ ೨೩ ॥

**ಸಂಭೋಜನಂ ಸಂಕಥನಂ ಸಂಪ್ರೀತಿಶ್ಚ ಪರಸ್ಪರಮ್ ।**
**ಜ್ಞಾತಿಭಿಃ ಸಹ ಕಾರ್ಯಾಣಿ ನ ವಿರೋಧಃ ಕದಾಚನ ॥ ೨೪ ॥**

ದಾಯಾದಿಗಳೊಂದಿಗೆ ಸಹಭೋಜನ ಹಾಗೂ ವಿಚಾರ ವಿನಿಮಯ ಮಾಡುತ್ತ ಪ್ರೀತಿ ವಿಶ್ವಾಸದಿಂದಿರುವುದು ಕರ್ತವ್ಯವಾಗಿದೆ. ಎಂದೂ ಅವರೊಂದಿಗೆ ವಿರೋಧವನ್ನು ಕಟ್ಟಿಕೊಳ್ಳಬಾರದು. ॥ ೨೪ ॥

**ಜ್ಞಾತಯಸ್ತಾರಯಂತೀಹ ಜ್ಞಾತಯೋ ಮಜ್ಜಯಂತಿ ಚ ।**
**ಸುವೃತ್ತಾಸ್ತಾರಯಂತೀಹ ದುರ್ವೃತ್ತಾ ಮಜ್ಜಯಂತಿ ಚ ॥ ೨೫ ॥**

ದಾಯಾದರು ಕಷ್ಟದಿಂದ ಪಾರುಮಾಡಲೂ ಸಮರ್ಥರು. ಹಾಗೆಯೇ ದುಃಖಸಾಗರ- ದಲ್ಲಿಯೂ ಮುಳುಗಿಸಬಲ್ಲರು. ಅವರು ಸದ್ವೃತ್ತಿಯುಳ್ಳವರಾಗಿದ್ದರೆ ಉದ್ಧರಿಸುತ್ತಾರೆ. ದುರ್ವೃತ್ತಿಯುಳ್ಳವರಾದರೆ ಮುಳುಗಿಸುತ್ತಾರೆ. ॥ ೨೫ ॥

**ಸುವೃತ್ತೋ ಭವ ರಾಜೇಂದ್ರ ಪಾಂಡವಾನ್ ಪ್ರತಿ ಮಾನದ ।**
**ಅಧರ್ಷಣೀಯಃ ಶತ್ರೂಣಾಂ ತೈರ್ವೃತಸ್ತ್ವಂ ಭವಿಷ್ಯಸಿ ॥ ೨೬ ॥**

ರಾಜೇಂದ್ರ ! ನೀನು ಪಾಂಡವರ ವಿಷಯದಲ್ಲಿ ಸದ್ವೃತ್ತಿಯುಳ್ಳವನಾಗು. ಪಾಂಡವರೊಡನೆ ಸೇರುವ ನೀನು ಸುರಕ್ಷಿತನಾಗಿ ಶತ್ರುಗಳಿಗೆ ದುರ್ಧರ್ಷನಾಗುವೆ. ॥ ೨೬ ॥

**ಶ್ರೀಮಂತಂ ಜ್ಞಾತಿಮಾಸಾದ್ಯ ಯೋ ಜ್ಞಾತಿರವಸೀದತಿ ।**
**ದಿಗ್ಧಹಸ್ತಂ ಮೃಗ ಇವ ಸ ಏನಸ್ತಸ್ಯ ವಿಂದತಿ ॥ ೨೭ ॥**

ಶ್ರೀಮಂತನಾದ ದಾಯಾದನ ಸಮೀಪಕ್ಕೆ ಆಶ್ರಯವನ್ನು ಪಡೆಯಲು ಹೋಗಿ

ಮೃಗದಂತೆ ವಿನಾಶಹೊಂದುವನೋ ಅವನ ಪಾಪಗಳೆಲ್ಲವನ್ನೂ ಶ್ರೀಮಂತನಾದ ದಾಯಾದನೇ ಪಡೆಯುತ್ತಾನೆ. ॥ ೨೭ ॥

**ಪಶ್ಚಾದಪಿ ನರಶ್ರೇಷ್ಠ ತವ ತಾಪೋ ಭವಿಷ್ಯತಿ ।**
**ತಾನ್ ವಾ ಹತಾನ್ ಸುತಾನ್ ವಾಪಿ ಶ್ರುತ್ವಾ ತದನುಚಿಂತಯ ॥ ೨೮ ॥**

ನರಶ್ರೇಷ್ಠ ! ನೀನು ಪಾಂಡವರ ಅಥವಾ ನಿನ್ನ ಮಕ್ಕಳ ಮರಣದ ಸುದ್ದಿಯನ್ನು ಕೇಳಿ ಪಶ್ಚಾತ್ತಾಪಪಡುವೆ. ಆದ್ದರಿಂದ ಇದರ ಬಗ್ಗೆ ಮೊದಲೇ ಕೂಲಂಕುಷವಾಗಿ ಸಮಾಲೋಚಿಸು. ॥ ೨೮ ॥

**ಯೇನ ಖಟ್ವಾಂ ಸಮಾರೂಢಃ ಪರಿತಪ್ಯೇತ ಕರ್ಮಣಾ ।**
**ಆದಾವೇವ ನ ತತ್ ಕುರ್ಯಾದಧ್ರುವೇ ಜೀವಿತೇ ಸತಿ ॥ ೨೯ ॥**

ಈ ಜೀವಿತವು ಶಾಶ್ವತವಲ್ಲ, ಯಾವ ಕೆಲಸವನ್ನು ಮಾಡುವುದರಿಂದ ಕೊನೆಯಲ್ಲಿ ಮಂಚದಲ್ಲಿ ಕುಳಿತು ಪರಿತಪಿಸಬೇಕಾಗುವುದೋ, ಅಂತಹುದನ್ನು ಮೊದಲೇ ಪರ್ಯಾಲೋಚಿಸಿ ಮಾಡದಿರುವುದೇ ಲೇಸು. ॥ ೨೯ ॥

**ನ ಕಶ್ಚಿನ್ನಾಪನಯತೇ ಪುಮಾನನ್ಯತ್ರ ಭಾರ್ಗವಾತ್ ।**
**ಶೇಷಸಂಪ್ರತಿಪತ್ತಿಸ್ತು ಬುದ್ಧಿಮತ್ಸ್ವೇವ ತಿಷ್ಠತಿ ॥ ೩೦ ॥**

ಶುಕ್ರಾಚಾರ್ಯರೊಬ್ಬರನ್ನು ಬಿಟ್ಟು ಬೇರೆ ಯಾರೂ ನೀತಿಯ ಅನುಸರಣೆಯಲ್ಲಿ ತಪ್ಪದಿರಲಾರರು. ಇದುವರೆಗೆ ಆದದ್ದು ಆಗಿ ಹೋಯಿತು. ಮುಂದೇನು ಮಾಡಬೇಕೆಂಬುದರ ಬಗ್ಗೆ ಸರಿಯಾದ ನಿರ್ಣಯವನ್ನು ತೆಗೆದುಕೊಳ್ಳುವುದು ನಿನ್ನಂತಹ ಬುದ್ಧಿವಂತರ ಕೈಯಲ್ಲಿದೆ. ॥ ೩೦ ॥

**ದುರ್ಯೋಧನೇನ ಯದ್ಯೇತತ್ ಪಾಪಂ ತೇಷು ಪುರಾ ಕೃತಮ್ ।**
**ತ್ವಯಾ ತತ್ ಕುಲವೃದ್ಧೇನ ಪ್ರತ್ಯಾನೇಯಂ ನರೇಶ್ವರ ॥ ೩೧ ॥**

ನರೇಶ್ವರ ! ದುರ್ಯೋಧನನು ಹಿಂದೆ ಪಾಂಡವರ ವಿಷಯದಲ್ಲಿ ಯಾವ ಪಾಪಕಾರ್ಯವನ್ನು ಮಾಡಿದನೋ ಆ ಪಾಪಕಾರ್ಯವನ್ನು ವೃದ್ಧನಾದ ನೀನು ತೊಡೆದುಹಾಕಬೇಕಾಗಿದೆ. ॥ ೩೧ ॥

**ತಾಂಸ್ತ್ವಂ ಪದೇ ಪ್ರತಿಷ್ಠಾಪ್ಯ ಲೋಕೇ ವಿಗತಕಲ್ಮಷಃ ।**
**ಭವಿಷ್ಯಸಿ ನರಶ್ರೇಷ್ಠ ಪೂಜನೀಯೋ ಮನೀಷಿಣಾಮ್ ॥ ೩೨ ॥**

ನರಶ್ರೇಷ್ಠ ! ಧರ್ಮಾತ್ಮರಾದ ಪಾಂಡವರನ್ನು ನೀನು ರಾಜ್ಯದಲ್ಲಿ ಪ್ರತಿಷ್ಠಾಪಿಸಿದರೆ

ನಿನ್ನ ಕಳಂಕ ತೊಳೆದೀತು. ಪಾಪರಹಿತನಾಗಿ, ಮನನಶೀಲರಾದ ಬುದ್ಧಿವಂತರಿಂದಲೂ ನೀನು ಪೂಜಾರ್ಹನಾಗುವೆ. ॥ ೩೨ ॥

**ಸುವ್ಯಾಹೃತಾನಿ ಧೀರಾಣಾಂ ಫಲತಃ ಪರಿಚಿಂತ್ಯ ಯಃ ।**
**ಅಧ್ಯವಸ್ಯತಿ ಕಾರ್ಯೇಷು ಚಿರಂ ಯಶಸಿ ತಿಷ್ಠತಿ ॥ ೩೩ ॥**

ಧೀರಪುರುಷರು ಹೇಳಿರುವ ಸದುಕ್ತಿಗಳ ಪರಿಣಾಮವೇನೆಂಬುದನ್ನು ಯಾರು ಕೂಲಂಕುಷವಾಗಿ ಸಮಾಲೋಚಿಸಿ, ಅವುಗಳನ್ನು ಕಾರ್ಯರೂಪಕ್ಕೆ ತರುತ್ತಾನೆಯೋ ಅವನು ಬಹಳ ಕಾಲದವರೆಗೆ ಯಶೋವಂತನಾಗಿ ಬಾಳುತ್ತಾನೆ. ॥ ೩೩ ॥

**ಅಸಮ್ಯಗುಪಯುಕ್ತಂ ಹಿ ಜ್ಞಾನಂ ಸುಕುಶಲೈರಪಿ ।**
**ಉಪಲಭ್ಯಂ ಚಾವಿದಿತಂ ವಿದಿತಂ ಚಾನನುಷ್ಠಿತಮ್ ॥ ೩೪ ॥**

ಉಪದೇಶದಿಂದ ಮಾಡಬೇಕಾದ ಕರ್ತವ್ಯವೇನು ಎಂಬುದು ತಿಳಿಯದಿದ್ದಲ್ಲಿ ಅಥವಾ ತಿಳಿದರೂ ಅದನ್ನು ಅನುಷ್ಠಾನಕ್ಕೆ ತರದಿದ್ದಲ್ಲಿ ಕುಶಲಮತಿಗಳಾದವರಿಂದ ಉಪದಿಷ್ಟವಾದ ಜ್ಞಾನವೂ ಸಹ ವ್ಯರ್ಥವಾಗಿಬಿಡುತ್ತದೆ. ॥ ೩೪ ॥

**ಪಾಪೋದಯಫಲಂ ವಿದ್ವಾನ್ ಯೋ ನಾರಭತಿ ವರ್ಧತೇ ।**
**ಯಸ್ತು ಪೂರ್ವಕೃತಂ ಪಾಪಮವಿಮೃಶ್ಯಾನುವರ್ತತೇ ।**
**ಅಗಾಧಪಂಕೇ ದುರ್ಮೇಧಾ ವಿಷಮೇ ವಿನಿಪಾತ್ಯತೇ ॥ ೩೫ ॥**

ಪಾಪರೂಪವಾದ ಫಲವನ್ನು ಕೊಡುವ ಕಾರ್ಯಗಳನ್ನು ಯಾವ ವಿದ್ವಾಂಸನು ಪ್ರಾರಂಭಿಸುವುದೇ ಇಲ್ಲವೋ ಅವನು ಅಭಿವೃದ್ಧಿ ಹೊಂದುತ್ತಾನೆ. ಯಾರು ಹಿಂದೆ ಮಾಡಿದ ಪಾಪಕರ್ಮಗಳನ್ನು ಸ್ವಲ್ಪವೂ ವಿಮರ್ಶಿಸದೆ ಅವುಗಳನ್ನೇ ಅನುಸರಿಸುತ್ತಾ ಹೋಗುತ್ತಾನೆಯೋ ಅಂತಹ ದುಷ್ಟ ಬುದ್ಧಿಯ ಮನುಷ್ಯನು ಅಗಾಧವಾದ ಹಳ್ಳ-ತಿಟ್ಟುಗಳಿಂದ ಕೂಡಿರುವ ಕೆಸರಿನಲ್ಲಿ (ನರಕದಲ್ಲಿ) ದೂಡಲ್ಪಡುತ್ತಾನೆ. ॥ ೩೫ ॥

**ಮಂತ್ರಭೇದಸ್ಯ ಷಟ್ ಪ್ರಾಜ್ಞೋ ದ್ವಾರಾಣೀಮಾನಿ ಲಕ್ಷಯೇತ್ ।**
**ಅರ್ಥಸಂತತಿಕಾಮಶ್ಚ ರಕ್ಷೇದೇತಾನಿ ನಿತ್ಯಶಃ ॥ ೩೬ ॥**
**ಮದಂ ಸ್ವಪ್ನಮವಿಜ್ಞಾನಮಾಕಾರಂ ಚಾತ್ಮಸಂಭವಮ್ ।**
**ದುಷ್ಟಾಮಾತ್ಯೇಷು ವಿಶ್ರಂಭಂ ದೂತಾಚ್ಚಾಕುಶಲಾದಪಿ ॥ ೩೭ ॥**

ಬುದ್ಧಿವಂತನಾದ ಮನುಷ್ಯನು ರಹಸ್ಯವಿಷಯಗಳು ಬಹಿರಂಗವಾಗಲು ಇರುವ ಈ ಆರು ಬಾಗಿಲುಗಳನ್ನು ತಿಳಿಯಬೇಕು. ಹಾಗೂ ಯಾರು ಅರ್ಥರಕ್ಷಣೆಯಲ್ಲಿ ಅಭಿಲಾಷೆ

ಸ್ವಪ್ನಸಮಯದಲ್ಲಿ ಬಯಲಾಗಬಹುದಾದ್ದರಿಂದ ನಿದ್ರಾಸಮಯದಲ್ಲಿ ಹತ್ತಿರದಲ್ಲಿ ಆಪ್ತರಲ್ಲದವರಿರಬಾರದು), ಶತ್ರುಪಕ್ಷದ ಗುಪ್ತಚರರು ಹತ್ತಿರವಿರುವರೆಂಬುದನ್ನು ತಿಳಿದುಕೊಳ್ಳದಿರುವುದು, ಮನಸ್ಸಿನ ಅಭಿಪ್ರಾಯವನ್ನು ಮುಖವಿಕಾರದಿಂದ ಹೊರಪಡಿಸುವುದು, ದುಷ್ಟರಾದ ಅಮಾತ್ಯರಲ್ಲಿ ನಂಬಿಕೆ ಇಡುವುದು ಹಾಗೂ ಅಕುಶಲನಾದ ದೂತನಲ್ಲಿ ಅತಿಯಾದ ಭರವಸೆ - ಈ ಆರು ಬಾಗಿಲುಗಳನ್ನು ಮುಚ್ಚಬೇಕು. ॥ ೩೬-೩೭ ॥

**ದ್ವಾರಾಣ್ಯೇತಾನಿ ಯೋ ಜ್ಞಾತ್ವಾ ಸಂವೃಣೋತಿ ಸದಾ ನೃಪ ।**
**ತ್ರಿವರ್ಗಾಚರಣೇ ಯುಕ್ತಃ ಸ ಶತ್ರೂನಧಿತಿಷ್ಠತಿ ॥ ೩೮ ॥**

ರಾಜನೇ ! ಯಾರು ಈ ಬಾಗಿಲುಗಳ ಬಗ್ಗೆ ತಿಳಿದುಕೊಂಡು ಸದಾ ಅವುಗಳನ್ನು ಮುಚ್ಚಿರುತ್ತಾನೆಯೋ ಆತನು ಧರ್ಮಾರ್ಥಕಾಮಗಳ ಸಾಧನೆಯಲ್ಲಿ ನಿರತನಾಗಿದ್ದು, ತನ್ನ ಶತ್ರುಗಳನ್ನು ಸ್ವಾಧೀನಪಡಿಸಿಕೊಳ್ಳಲು ಸಮರ್ಥನಾಗಿರುತ್ತಾನೆ. ॥ ೩೮ ॥

**ನ ವೈ ಶ್ರುತಮವಿಜ್ಞಾಯ ವೃದ್ಧಾನನುಪಸೇವ್ಯ ವಾ ।**
**ಧರ್ಮಾರ್ಥೌ ವೇದಿತುಂ ಶಕ್ಯೌ ಬೃಹಸ್ಪತಿಸಮೈರಪಿ ॥ ೩೯ ॥**

ಬೃಹಸ್ಪತಿಗೆ ಸಮಾನ (ಬುದ್ಧಿಶಕ್ತಿಯುಳ್ಳವ)ರಾಗಿದ್ದರೂ ಸಹ ಶಾಸ್ತ್ರಾರ್ಥಗಳನ್ನು ಅರಿಯದೇ ವೃದ್ಧರನ್ನು ಉಪಚರಿಸದೇ ಧರ್ಮಾರ್ಥಗಳ ರಹಸ್ಯಗಳನ್ನು ತಿಳಿದುಕೊಳ್ಳಲು ಸಾಧ್ಯವಾಗುವುದಿಲ್ಲ. ॥ ೩೯ ॥

**ನಷ್ಟಂ ಸಮುದ್ರೇ ಪತಿತಂ ನಷ್ಟಂ ವಾಕ್ಯಮಶೃಣ್ವತಿ ।**
**ಅನಾತ್ಮನಿ ಶ್ರುತಂ ನಷ್ಟಂ ನಷ್ಟಂ ಹುತಮನಗ್ನಿಕಮ್ ॥ ೪೦ ॥**

ಸಮುದ್ರದಲ್ಲಿ ಬಿದ್ದ ವಸ್ತುವು ನಾಶವಾಗಿಹೋಗುತ್ತದೆ. ಗಮನವಿಟ್ಟು ಕೇಳದವನೊಡನೆ ಆಡುವ ಮಾತುಗಳು ನಷ್ಟವಾಗಿ ಹೋಗುತ್ತವೆ. ಜಿತೇಂದ್ರಿಯನಲ್ಲದವನಲ್ಲಿರುವ ಶಾಸ್ತ್ರಜ್ಞಾನವು ನಿಷ್ಪ್ರಯೋಜಕವೇ ಸರಿ. ಕೇವಲ ಬೂದಿಯ ಮೇಲೆ ಮಾಡುವ ಹೋಮವೂ ಸಹ ನಷ್ಟವಾಗಿ ಹೋಗುತ್ತದೆ. ॥ ೪೦ ॥

**ಮತ್ಯಾ ಪರೀಕ್ಷ್ಯ ಮೇಧಾವೀ ಬುದ್ಧ್ಯಾ ಸಂಪಾದ್ಯ ಚಾಸಕೃತ್ ।**
**ಶ್ರುತ್ವಾ ದೃಷ್ಟ್ವಾಥ ವಿಜ್ಞಾಯ ಪ್ರಾಜ್ಞೈರ್ಮೈತ್ರೀಂ ಸಮಾಚರೇತ್ ॥ ೪೧ ॥**

ಪ್ರಾಜ್ಞರಾದವರೊಡನೆ ಮೈತ್ರಿಯನ್ನು ಬೆಳೆಸಬೇಕು. ಪ್ರಾಜ್ಞರಾರೆಂಬುದನ್ನು ತಿಳಿದುಕೊಳ್ಳಲು ಮೇಧಾವಿಯಾದವನು ತನ್ನ ಬುದ್ಧಿಯಿಂದ ಚೆನ್ನಾಗಿ ಪರೀಕ್ಷಿಸಿ ಅನುಭವದ ಆಧಾರದ ಮೇಲೆ ಆತನ ಯೋಗ್ಯತೆಯನ್ನು ಅರಿತು, ಇತರರು ಹೇಳುವುದನ್ನು ಕೇಳಿ ಹಾಗೂ ಸ್ವಯಂ ನೋಡಿ ವಿಮರ್ಶಿಸಿ ಅರಿಯಬೇಕು. ॥ ೪೧ ॥

**ಅಕೀರ್ತಿಂ ವಿನಯೋ ಹಂತಿ ಹಂತ್ಯನರ್ಥಂ ಪರಾಕ್ರಮಃ।**
**ಹಂತಿ ನಿತ್ಯಂ ಕ್ಷಮಾ ಕ್ರೋಧಮಾಚಾರೋ ಹಂತ್ಯಲಕ್ಷಣಮ್ ॥ ೪೨ ॥**

ವಿನಯಶೀಲತೆಯು ಅಪಕೀರ್ತಿಯನ್ನು ತೊಡೆದುಹಾಕುತ್ತದೆ. ಪರಾಕ್ರಮವು ಅನರ್ಥವನ್ನು (ಆಪತ್ತನ್ನು) ತೊಡೆಯುತ್ತದೆ. ಸದಾ ಕ್ಷಮಾಶೀಲತೆಯು ಕೋಪವನ್ನು ನಾಶಮಾಡುತ್ತದೆ ಹಾಗೂ ಆಚಾರಸಂಪನ್ನತೆಯು ಅಪಲಕ್ಷಣಗಳನ್ನು ನೀಗುತ್ತದೆ. ॥ ೪೨ ॥

**ಪರಿಚ್ಛೇದೇನ ಕ್ಷೇತ್ರೇಣ ವೇಶ್ಮನಾ ಪರಿಚರ್ಯಯಾ।**
**ಪರೀಕ್ಷೇತ ಕುಲಂ ರಾಜನ್ ಭೋಜನಾಚ್ಛಾದನೇನ ಚ ॥ ೪೩ ॥**

ರಾಜನೇ ! ನಾನಾ ವಿಧವಾದ ಭೋಗಸಾಮಗ್ರಿಗಳು, ಸ್ಥಿರಾಸ್ತಿ ಮನೆ, ಅವನ ಊಟ, ಉಡುಪು ಹಾಗೂ ಅವನು ಯಾರಿಗೆ ಸೇವೆ ಮಾಡುತ್ತಿದ್ದಾನೆ ಎಂಬಿವನ್ನೆಲ್ಲ ಅರಿಯುವ ಮೂಲಕ ಕುಲದ ಪರೀಕ್ಷೆಯನ್ನು ಮಾಡಬಹುದಾಗಿದೆ. ॥ ೪೩ ॥

**ಉಪಸ್ಥಿತಸ್ಯ ಕಾಮಸ್ಯ ಪ್ರತಿವಾದೋ ನ ವಿದ್ಯತೇ।**
**ಅಪಿ ನಿರ್ಮುಕ್ತದೇಹಸ್ಯ ಕಾಮರಕ್ತಸ್ಯ ಕಿಂ ಪುನಃ ॥ ೪೪ ॥**

ದೇಹಾಭಿಮಾನದಿಂದ ರಹಿತನಾದ ಪುರುಷನ ಬಳಿ ನ್ಯಾಯಯುಕ್ತವಾದ ಪದಾರ್ಥವು ಸ್ವತಃ ಬಂದಲ್ಲಿ ಆತನು ಅದನ್ನು ನಿರಾಕರಿಸುವುದಿಲ್ಲ. ಹೀಗಿರುವಾಗ ಕಾಮ್ಯವಸ್ತುಗಳಲ್ಲಿಯೇ ಸರ್ವದಾ ಆಸಕ್ತನಾದವನ ವಿಷಯವಾಗಿ ಹೇಳುವುದೇನಿದೆ ? ॥ ೪೪ ॥

**ಪ್ರಾಜ್ಞೋಪಸೇವಿನಂ ವೈದ್ಯಂ ಧಾರ್ಮಿಕಂ ಪ್ರಿಯದರ್ಶನಮ್।**
**ಮಿತ್ರವಂತಂ ಸುವಾಕ್ಯಂ ಚ ಸುಹೃದಂ ಪರಿಪಾಲಯೇತ್ ॥ ೪೫ ॥**

ಯಾರು ಜ್ಞಾನಿಗಳ ಸೇವೆಯಲ್ಲಿ ನಿರತನಾಗಿರುತ್ತಾನೆಯೋ, ವೈದ್ಯನೋ, ಧಾರ್ಮಿಕನೋ, ಸುಂದರಾಂಗನೋ, ಸನ್ಮಿತ್ರರನ್ನು ಹೊಂದಿರುವನೋ, ಮಧುರಭಾಷಿಯೋ – ಅಂತಹ ಗೆಳೆಯನನ್ನು ಸರ್ವದಾ ರಕ್ಷಿಸಿಕೊಳ್ಳಬೇಕು. ॥ ೪೫ ॥

**ದುಷ್ಕುಲೀನಃ ಕುಲೀನೋ ವಾ ಮರ್ಯಾದಾಂ ಯೋ ನ ಲಂಘಯೇತ್।**
**ಧರ್ಮಾಪೇಕ್ಷೀ ಮೃದುರ್ಹ್ರೀಮಾನ್ ಸ ಕುಲೀನಶತಾದ್ ವರಃ ॥ ೪೬ ॥**

ಯಾರು ಲೋಕಮರ್ಯಾದೆಯನ್ನು ಮೀರಿ ನಡೆಯುವುದಿಲ್ಲವೋ, ಧರ್ಮಮಾರ್ಗದಲ್ಲಿಯೇ ನಡೆಯಬೇಕೆಂಬ ಅಪೇಕ್ಷೆಯುಳ್ಳವನಾಗಿರುವನೋ, ಮೃದುಸ್ವಭಾವದವನಾಗಿರುವನೋ, ಲಜ್ಜಾಶೀಲನೋ ಅಂತಹವನು ಸತ್ಕುಲಪ್ರಸೂತನಲ್ಲದಿದ್ದರೂ ನೂರುಮಂದಿ ಕುಲೀನರಿಗಿಂತಲೂ ಶ್ರೇಷ್ಠನಾಗಿರುತ್ತಾನೆ ॥ ೪೬ ॥

**ಯಯೋಶ್ಚಿತ್ತೇನ ವಾ ಚಿತ್ತಂ ನಿಭೃತಂ ನಿಭೃತೇನ ವಾ ।**
**ಸಮೇತಿ ಪ್ರಜ್ಞಯಾ ಪ್ರಜ್ಞಾ ತಯೋರ್ಮೈತ್ರೀ ನ ಜೀರ್ಯತಿ ॥ ೪೭ ॥**

ಯಾರಿಬ್ಬರ ಮನಸ್ಸೂ ಒಂದೇ ಆಗಿರುವುದೋ, ರಹಸ್ಯ ಸಮಾಲೋಚನೆಯೂ ಒಂದೇ ಆಗಿರುವುದೋ ಮತ್ತು ಯಾರಿಬ್ಬರ ಬುದ್ಧಿಯೂ ಒಂದೇ ಆಗಿರುವುದೋ (ಹೊಂದಿಕೊಳ್ಳುವುದೋ) ಆ ಇಬ್ಬರಲ್ಲಿ ಉಂಟಾಗುವ ಮೈತ್ರಿಯು ಎಂದಿಗೂ ಶಿಥಿಲವಾಗಿ ಹೋಗುವುದಿಲ್ಲ. ॥ ೪೭ ॥

**ದುರ್ಬುದ್ಧಿಮಕೃತಪ್ರಜ್ಞಂ ಛನ್ನಂ ಕೂಪಂ ತೃಣೈರಿವ ।**
**ವಿವರ್ಜಯೀತ ಮೇಧಾವೀ ತಸ್ಮಿನ್ ಮೈತ್ರೀ ಪ್ರಣಶ್ಯತಿ ॥ ೪೮ ॥**

ಹುಲ್ಲಿನಿಂದ ಮುಚ್ಚಿರುವ ಬಾವಿಯನ್ನು ವಿಸರ್ಜಿಸುವಂತೆ ಮೇಧಾವಿಯಾದವನು ದುರ್ಬುದ್ಧಿಯವನನ್ನೂ ವಿಚಾರಶಕ್ತಿಯಿಲ್ಲದವನನ್ನೂ ವಿಸರ್ಜಿಸಬೇಕು. ಅಂತಹವರೊಡನೆ ಮಾಡುವ ಮೈತ್ರಿಯು ನಾಶಹೊಂದುವಂತಹದು. ॥ ೪೮ ॥

**ಅವಲಿಪ್ತೇಷು ಮೂರ್ಖೇಷು ರೌದ್ರಸಾಹಸಿಕೇಷು ಚ ।**
**ತಥೈವಾಪೇತಧರ್ಮೇಷು ನ ಮೈತ್ರೀಮಾಚರೇದ್ ಬುಧಃ ॥ ೪೯ ॥**

ದುರಹಂಕಾರಿಗಳೊಡನೆ, ಮೂರ್ಖ, ಕೋಪಿಷ್ಠ, ಸಾಹಸಿ (ದುಡುಕುವವ) ಹಾಗೂ ಧರ್ಮಭ್ರಷ್ಟರೊಡನೆ ಪಂಡಿತನಾದವನು ಸ್ನೇಹವನ್ನು ಬೆಳೆಸಬಾರದು. ॥ ೪೯ ॥

**ಕೃತಜ್ಞಂ ಧಾರ್ಮಿಕಂ ಸತ್ಯಮಕ್ಷುದ್ರಂ ದೃಢಭಕ್ತಿಕಮ್ ।**
**ಜಿತೇಂದ್ರಿಯಂ ಸ್ಥಿತಂ ಸ್ಥಿತ್ಯಾಂ ಮಿತ್ರಮತ್ಯಾಗಿ ಚೇಷ್ಯತೇ ॥ ೫೦ ॥**

ಕೃತಜ್ಞ, ಧಾರ್ಮಿಕ, ಸತ್ಯವಾದಿ, ಗಂಭೀರಪ್ರವೃತ್ತಿಯುಳ್ಳವ, ದೃಢವಾದ ಅನುರಾಗವುಳ್ಳವ, ಜಿತೇಂದ್ರಿಯ, ಒಳ್ಳೆಯ ಸ್ಥಿತಿಯಲ್ಲಿರುವವ, ಯಾವ ಕಾರಣದಿಂದಲೂ ಮೈತ್ರಿಯನ್ನು ತ್ಯಾಗ ಮಾಡದವ – ಇಂತಹವನನ್ನು ಮಿತ್ರನನ್ನಾಗಿ ಮಾಡಿಕೊಳ್ಳಬೇಕು. ॥ ೫೦ ॥

**ಇಂದ್ರಿಯಾಣಾಮನುತ್ಸರ್ಗೋ ಮೃತ್ಯುನಾಪಿ ವಿಶಿಷ್ಯತೇ ।**
**ಅತ್ಯರ್ಥಂ ಪುನರುತ್ಸರ್ಗಃ ಸಾದಯೇದ್ ದೈವತಾನ್ಯಪಿ ॥ ೫೧ ॥**

ಇಂದ್ರಿಯಗಳನ್ನು ಪೂರ್ಣವಾಗಿ ನಿರೋಧಿಸುವುದು ಮೃತ್ಯುವನ್ನು ನಿರೋಧಿಸುವುದಕ್ಕಿಂತಲೂ ಕಠಿಣವಾದುದು. ಹಾಗೆಯೇ ಇಂದ್ರಿಯಗಳನ್ನು ವಿಷಯ-ಸುಖಗಳಲ್ಲಿಯೇ ಲೀನಗೊಳಿಸುವಿಕೆಯು ದೇವತೆಗಳನ್ನೂ ಸಹ ನಾಶಮಾಡಿಬಿಡುತ್ತದೆ. ॥ ೫೧ ॥

**ಮಾರ್ದವಂ ಸರ್ವಭೂತಾನಾಮನಸೂಯಾ ಕ್ಷಮಾ ಧೃತಿಃ ।**
**ಆಯುಷ್ಯಾಣಿ ಬುಧಾಃ ಪ್ರಾಹುರ್ಮಿತ್ರಾಣಾಂ ಚಾವಿಮಾನನಾ ॥ ೫೨ ॥**

ಸರ್ವಪ್ರಾಣಿಗಳ ವಿಷಯದಲ್ಲಿಯೂ ಕೋಮಲಭಾವ, ಗುಣದಲ್ಲಿ ದೋಷವೆಣಿಸದಿರುವುದು, ಕ್ಷಮಾಗುಣ, ಎಂತಹ ಆಪತ್ತಿನಲ್ಲಿಯೂ ಧೈರ್ಯದಿಂದಿರುವುದು, ಮಿತ್ರರನ್ನು ಎಂದೂ ಅವಮಾನಗೊಳಿಸದಿರುವುದು - ಇವುಗಳು ಆಯುರ್ವೃದ್ಧಿಕಾರಕಗಳೆಂದು ಪಂಡಿತರಾದವರು ಹೇಳುತ್ತಾರೆ. ॥ ೫೨ ॥

**ಅಪನೀತಂ ಸುನೀತೇನ ಯೋಽರ್ಥಂ ಪ್ರತ್ಯಾನಿನೀಷತೇ ।**
**ಮತಿಮಾಸ್ಥಾಯ ಸುದೃಢಾಂ ತದಕಾಪುರುಷವ್ರತಮ್ ॥ ೫೩ ॥**

ಅನ್ಯಾಯವಾಗಿ ನಷ್ಟವಾದ ಐಶ್ವರ್ಯವನ್ನು ಸುದೃಢವಾದ ಬುದ್ಧಿಯಿಂದಲೂ ನೀತಿಮಾರ್ಗದಿಂದಲೂ ಯಾವನು ಪಡೆದುಕೊಳ್ಳಲು ಇಚ್ಛಿಸುತ್ತಾನೆಯೋ ಮತ್ತು ಪ್ರಯತ್ನಿಸುತ್ತಾನೆಯೋ ಆತನ ಅಂತಹ ಪ್ರಯತ್ನಕ್ಕೆ ವೀರಪುರುಷವ್ರತವೆಂದೇ ಹೆಸರು. ॥ ೫೩ ॥

**ಆಯತ್ಯಾಂ ಪ್ರತಿಕಾರಜ್ಞಸ್ತದಾತ್ವೇ ದೃಢನಿಶ್ಚಯಃ ।**
**ಅತೀತೇ ಕಾರ್ಯಶೇಷಜ್ಞೋ ನರೋಽರ್ಥೈರ್ನ ಪ್ರಹೀಯತೇ ॥ ೫೪ ॥**

ಮುಂದೊದಗಬಹುದಾದ ವಿಪತ್ತನ್ನರಿತು ಪರಿಹಾರವನ್ನು ಸಿದ್ಧಪಡಿಸಿಕೊಂಡಿರುವವನು, ಇಂದು ಮಾಡುವ ಕಾರ್ಯಗಳ ಬಗ್ಗೆ ದೃಢನಿಶ್ಚಯವಿರುವವನು ಹಾಗೂ ಹಿಂದೆ ಪ್ರಾರಂಭಿಸಿದ ಕಾರ್ಯದ ಅವಶೇಷಗಳ ಬಗ್ಗೆ ಜ್ಞಾನ ಹೊಂದಿರುವವನು - ಯಾವ ಕಾರಣದಿಂದಲೂ ಅರ್ಥಹೀನನಾಗುವುದಿಲ್ಲ. ॥ ೫೪ ॥

**ಕರ್ಮಣಾ ಮನಸಾ ವಾಚಾ ಯದಭೀಕ್ಷ್ಣಂ ನಿಷೇವತೇ ।**
**ತದೇವಾಪಹರತ್ಯೇನಂ ತಸ್ಮಾತ್ ಕಲ್ಯಾಣಮಾಚರೇತ್ ॥ ೫೫ ॥**

ಒಬ್ಬ ಮನುಷ್ಯನು - ಕಾರ್ಯದಿಂದ, ಮನಸ್ಸಿನಿಂದ ಮತ್ತು ಮಾತಿನಿಂದ ಯಾವುದನ್ನು ನಿರಂತರವಾಗಿ ಸೇವಿಸುತ್ತಾನೆಯೋ ಅದೇ ಅವನನ್ನು ಅಪಹರಿಸಿಬಿಡುತ್ತದೆ. ಆದ್ದರಿಂದ

**ಮಂಗಲಾಲಂಭನಂ ಯೋಗಃ ಶ್ರುತಮುತ್ಥಾನಮಾರ್ಜವಮ್ ।**
**ಭೂತಿಮೇತಾನಿ ಕುರ್ವಂತಿ ಸತಾಂ ಚಾಭೀಕ್ಷ್ಣದರ್ಶನಮ್ ॥ ೫೬ ॥**

ಮಂಗಳಕರವಾದುದರ ಸ್ಪರ್ಶ, ಚಿತ್ತವೃತ್ತಿ ನಿರೋಧ, ಶಾಸ್ತ್ರಾಧ್ಯಯನ, ಉದ್ಯೋಗಶೀಲತೆ, ಸರಳತೆ ಹಾಗೂ ಸತ್ಪುರುಷರ ನಿರಂತರ ಸಹವಾಸ - ಇವುಗಳು ಮಾನವನಿಗೆ ಕಲ್ಯಾಣಕರಗಳಾಗಿರುತ್ತವೆ. ॥ ೫೬ ॥

**ಅನಿರ್ವೇದಃ ಶ್ರಿಯೋ ಮೂಲಂ ಲಾಭಸ್ಯ ಚ ಶುಭಸ್ಯ ಚ ।**
**ಮಹಾನ್ ಭವತ್ಯನಿರ್ವಿಣ್ಣಃ ಸುಖಂ ಚಾನಂತ್ಯಮಶ್ನುತೇ ॥ ೫೭ ॥**

ಉದ್ಯೋಗಶೀಲತೆಯಿಂದ ವಿರಕ್ತನಾಗದೇ ಇರುವುದೇ ಐಶ್ವರ್ಯ, ಕೀರ್ತಿ ಹಾಗೂ ಮಂಗಳಕ್ಕೆ ಕಾರಣವಾಗಿದೆ. ಆದ್ದರಿಂದ ಖಿನ್ನನಾಗಿರದೆ ಉದ್ಯೋಗಶೀಲನಾಗಿರುವವನು ಮಹಾತ್ಮನಾಗುತ್ತಾನೆ ಹಾಗೂ ಅನಂತವಾದ ಸುಖವನ್ನನುಭವಿಸುತ್ತಾನೆ. ॥ ೫೭ ॥

**ನಾತಃ ಶ್ರೀಮತ್ತರಂ ಕಿಂಚಿದನ್ಯತ್ ಪಥ್ಯತಮಂ ಮತಮ್ ।**
**ಪ್ರಭವಿಷ್ಣೋರ್ಯಥಾ ತಾತ ಕ್ಷಮಾ ಸರ್ವತ್ರ ಸರ್ವದಾ ॥ ೫೮ ॥**

ತಾತ ! ಪ್ರವರ್ಧಿಸುತ್ತಿರುವ ಸಮರ್ಥಪುರುಷನಿಗೆ ಎಲ್ಲ ಸಮಯಗಳಲ್ಲಿಯೂ ಎಲ್ಲೆಡೆಯಲ್ಲಿಯೂ ಕ್ಷಮೆಗೆ ಸಮಾನವಾದ, ಅತ್ಯಂತ ಹಿತಕರವಾದ, ಸಂಪತ್ಪ್ರಾಪಕವಾದ ಗುಣವು ಬೇರೊಂದಿಲ್ಲ. ॥ ೫೮ ॥

**ಕ್ಷಮೇದಶಕ್ತಃ ಸರ್ವಸ್ಯ ಶಕ್ತಿಮಾನ್ ಧರ್ಮಕಾರಣಾತ್ ।**
**ಅರ್ಥಾನರ್ಥೌ ಸಮೌ ಯಸ್ಯ ತಸ್ಯ ನಿತ್ಯಂ ಕ್ಷಮಾ ಹಿತಾ ॥ ೫೯ ॥**

ಅಶಕ್ತನಾದವನು ಎಲ್ಲರೊಡನೆಯೂ ಕ್ಷಮಾವಂತನಾಗಿಯೇ ಇರಬೇಕು. ಶಕ್ತನಾದವನೂ ಸಹ ಧರ್ಮದ ಕಾರಣದಿಂದ ಕ್ಷಮಾವಂತನಾಗಿಯೇ ಇರಬೇಕು. ಅರ್ಥ-ಅನರ್ಥಗಳನ್ನು ಯಾರು ಸಮಾನದೃಷ್ಟಿಯಿಂದ ನೋಡುತ್ತಾನೆಯೋ ಅಂತಹವನಿಗೆ ಸದಾಕಾಲದಲ್ಲಿಯೂ ಕ್ಷಮಾಗುಣವೇ ಅತ್ಯಂತ ಹಿತಕರವಾಗಿರುತ್ತದೆ. ॥ ೫೯ ॥

**ಯತ್ ಸುಖಂ ಸೇವಮಾನೋಽಪಿ ಧರ್ಮಾರ್ಥಾಭ್ಯಾಂ ನ ಹೀಯತೇ ।**
**ಕಾಮಂ ತದುಪಸೇವೇತ ನ ಮೂಢವ್ರತಮಾಚರೇತ್ ॥ ೬೦ ॥**

ಯಾವ ಸುಖವನ್ನು ಅನುಭವಿಸುವುದರಿಂದ ಧರ್ಮಾರ್ಥಗಳಿಗೆ ಯಾವುದೇ ನ್ಯೂನತೆಯೂ ಉಂಟಾಗುವುದಿಲ್ಲವೋ ಅಂತಹ ಸುಖವನ್ನು ಮಾನವನು

ಯಥೇಚ್ಛವಾಗಿ ಅನುಭವಿಸಬಹುದು. ಮೂಢವ್ರತವನ್ನು (ಅನ್ಯಾಯಪೂರ್ವಕವಾಗಿ ವಿಷಯಸೇವನೆ) ಮಾಡಬಾರದು. ॥ ೬೦ ॥

**ದುಃಖಾರ್ತೇಷು ಪ್ರಮತ್ತೇಷು ನಾಸ್ತಿಕೇಷ್ವಲಸೇಷು ಚ ।**
**ನ ಶ್ರೀರ್ವಸತ್ಯದಾಂತೇಷು ಯೇ ಚೋತ್ಸಾಹವಿವರ್ಜಿತಾಃ ॥ ೬೧ ॥**

ದುಃಖದಿಂದ ಪೀಡಿತರಾದವರಲ್ಲಿ, ದುರಹಂಕಾರಿಗಳಲ್ಲಿ, ನಾಸ್ತಿಕರಲ್ಲಿ, ಸೋಮಾರಿಗಳಲ್ಲಿ, ಜಿತೇಂದ್ರಿಯರಲ್ಲದವರಲ್ಲಿ ಮತ್ತು ಉತ್ಸಾಹರಹಿತರಾದವರಲ್ಲಿ ಲಕ್ಷ್ಮಿಯು ವಾಸವಾಗಿರುವುದಿಲ್ಲ. ॥ ೬೧ ॥

**ಆರ್ಜವೇನ ನರಂ ಯುಕ್ತಮಾರ್ಜವಾತ್ ಸವ್ಯಪತ್ರಪಮ್ ।**
**ಅಶಕ್ತಂ ಮನ್ಯಮಾನಾಸ್ತು ಧರ್ಷಯಂತಿ ಕುಬುದ್ಧಯಃ ॥ ೬೨ ॥**

ಕುತ್ಸಿತಬುದ್ಧಿಯುಳ್ಳವರು ಸರಳತೆಯಿಂದಿರುವ ಮನುಷ್ಯನನ್ನು ಮತ್ತು ಸರಳತೆಯಿಂದಲೇ ಲಜ್ಜಾಶೀಲನಾಗಿರುವ ಮನುಷ್ಯನನ್ನು ಅಶಕ್ತನೆಂಬುದಾಗಿ ಭಾವಿಸಿ ಅಂತಹವನ ವಿಷಯದಲ್ಲಿ ತಿರಸ್ಕಾರಬುದ್ಧಿಯುಳ್ಳವರಾಗಿರುತ್ತಾರೆ. ॥ ೬೨ ॥

**ಅತ್ಯಾರ್ಯಮತಿದಾತಾರಮತಿಶೂರಮತಿವ್ರತಮ್ ।**
**ಪ್ರಜ್ಞಾಭಿಮಾನಿನಂ ಚೈವ ಶ್ರೀರ್ಭಯಾನ್ನೋಪಸರ್ಪತಿ ॥ ೬೩ ॥**

ಅತ್ಯಂತ ಶ್ರೇಷ್ಠನ, ಬಹು ದಾನಶೀಲನ, ಮಹಾಶೂರನ, ಅಧಿಕವಾದ ವ್ರತನಿಷ್ಠೆಯುಳ್ಳವನ ಹಾಗೂ ತನ್ನ ಜ್ಞಾನದ ಬಗ್ಗೆ ಅತ್ಯಂತ ಅಭಿಮಾನವನ್ನು ಹೊಂದಿರುವವನ ಬಳಿ ಲಕ್ಷ್ಮಿಯು ಭಯದ ಕಾರಣದಿಂದ ಹೋಗಲಾರಳು. ॥ ೬೩ ॥

**ನ ಚಾತಿಗುಣವತ್ಸ್ವೇಷಾ ನಾತ್ಯಂತಂ ನಿರ್ಗುಣೇಷು ಚ ।**
**ನೈಷಾ ಗುಣಾನ್ ಕಾಮಯತೇ ನೈರ್ಗುಣ್ಯಾನ್ನಾನುರಜ್ಯತೇ ।**
**ಉನ್ಮತ್ತಾ ಗೌರಿವಾಂಧಾ ಶ್ರೀಃ ಕ್ವಚಿದೇವಾವತಿಷ್ಠತೇ ॥ ೬೪ ॥**

ರಾಜಲಕ್ಷ್ಮಿಯು ಬಹುಗುಣಶಾಲಿಯಾದವನ ಬಳಿಯೂ ಇರುವುದಿಲ್ಲ ಅಥವಾ ಅತ್ಯಂತ ಗುಣಹೀನನ ಬಳಿಯೂ ಇರುವುದಿಲ್ಲ. ಆಕೆ ಬಹು ಗುಣಶೀಲನನ್ನೂ ಅಪೇಕ್ಷಿಸುವುದಿಲ್ಲ ಹಾಗೂ ಗುಣಹೀನನ ವಿಷಯದಲ್ಲೂ ಅನುರಕ್ತಳಾಗಿರುವುದಿಲ್ಲ. ಉನ್ಮತ್ತವಾದ ಹಸುವಿನಂತೆ ಅಂಧಳಾದ ಲಕ್ಷ್ಮಿಯು ಎಲ್ಲೆಲ್ಲೋ ಅಲೆಯುತ್ತಾಳೆ. ॥ ೬೪ ॥

**ಅಗ್ನಿಹೋತ್ರಫಲಾ ವೇದಾಃ ಶೀಲವೃತ್ತಫಲಂ ಶ್ರುತಮ್ ।**
**ರತಿಪುತ್ರಫಲಾ ನಾರೀ ದತ್ತಭುಕ್ತಫಲಂ ಧನಮ್ ॥ ೬೫ ॥**

ಶಾಸ್ತ್ರಾಧ್ಯಯನದ ಫಲ. ರತಿಸುಖ ಮತ್ತು ಮಕ್ಕಳನ್ನು ಪಡೆಯುವುದೇ ನಾರಿಯಿಂದ ಪಡೆವ ಫಲ. ದಾನ ಮಾಡುವುದು ಮತ್ತು ಅನುಭವಿಸುವುದೇ ಧನದ ಫಲ. ॥ ೬೫ ॥

**ಅಧರ್ಮೋಪಾರ್ಜಿತೈರರ್ಥೈರ್ಯಃ ಕರೋತ್ಯೌರ್ಧ್ವದೇಹಿಕಮ್ ।**
**ನ ಸ ತಸ್ಯ ಫಲಂ ಪ್ರೇತ್ಯ ಭುಂಕ್ತೇಽರ್ಥಸ್ಯ ದುರಾಗಮಾತ್ ॥ ೬೬ ॥**

ಯಾರು ಅಧರ್ಮಮಾರ್ಗದಿಂದ ಸಂಪಾದಿಸಿದ ಹಣದಿಂದ ಪರಲೋಕಪ್ರಾಪ್ತಿಗೆ ಸಾಧಕಗಳಾದ ಯಜ್ಞ - ದಾನಾದಿ ಕರ್ಮಗಳನ್ನು ಆಚರಿಸುತ್ತಾನೆಯೋ ಅವನು ಮರಣಾನಂತರ ಆ ಕರ್ಮಗಳ ಫಲವನ್ನು ಪಡೆಯಲಾರನು. ಏಕೆಂದರೆ ಅರ್ಥಸಂಪಾದನೆಯು ದುರ್ಮಾರ್ಗದಿಂದ ಕೂಡಿದೆ. ॥ ೬೬ ॥

**ಕಾಂತಾರೇ ವನದುರ್ಗೇಷು ಕೃಚ್ಛ್ರಾಸ್ವಾಪತ್ಸು ಸಂಭ್ರಮೇ ।**
**ಉದ್ಯತೇಷು ಚ ಶಸ್ತ್ರೇಷು ನಾಸ್ತಿ ಸತ್ತ್ವವತಾಂ ಭಯಮ್ ॥ ೬೭ ॥**

ಮಹಾರಣ್ಯದಲ್ಲಿಯೇ ಆಗಲಿ, ದುರ್ಗಮವಾದ ಮಾರ್ಗಗಳಲ್ಲಿಯೇ ಆಗಲಿ, ಮಹಾ ವಿಪತ್ತುಗಳಲ್ಲಿಯೇ ಆಗಲಿ, ಗಾಬರಿಗೊಳ್ಳುವ ಸಮಯದಲ್ಲಿಯೇ ಆಗಲಿ, ಎದುರಾಳಿಯು ಶಸ್ತ್ರವನ್ನೆತ್ತಿಕೊಂಡುಬಂದ ಸಮಯದಲ್ಲೇ ಆಗಲಿ - ಆತ್ಮಬಲಯುಕ್ತರಾದ ಪುರುಷರಿಗೆ ಭಯವಿರುವುದಿಲ್ಲ. ॥ ೬೭ ॥

**ಉತ್ಥಾನಂ ಸಂಯಮೋ ದಾಕ್ಷ್ಯಮಪ್ರಮಾದೋ ಧೃತಿಃ ಸ್ಮೃತಿಃ ।**
**ಸಮೀಕ್ಷ್ಯ ಚ ಸಮಾರಂಭೋ ವಿದ್ಧಿ ಮೂಲಂ ಭವಸ್ಯ ತು ॥ ೬೮ ॥**

ಪರಿಶ್ರಮ, ಸಂಯಮ, ದಕ್ಷತೆ, ಜಾಗರೂಕತೆ, ಧೈರ್ಯ, ಸ್ಮರಣಶಕ್ತಿ ಹಾಗೂ ಲಾಭಾಲಾಭಗಳ ಬಗ್ಗೆ ಪೂರ್ಣವಾಗಿ ವಿವೇಚಿಸಿ ಕಾರ್ಯಾರಂಭ ಮಾಡುವುದು - ಇವುಗಳು ಮನುಷ್ಯನ ಅಭ್ಯುದಯಕ್ಕೆ ಮೂಲಭೂತವಾದ ವಿಷಯಗಳಾಗಿವೆ. ॥ ೬೮ ॥

**ತಪೋ ಬಲಂ ತಾಪಸಾನಾಂ ಬ್ರಹ್ಮ ಬ್ರಹ್ಮವಿದಾಂ ಬಲಮ್ ।**
**ಹಿಂಸಾ ಬಲಮಸಾಧೂನಾಂ ಕ್ಷಮಾ ಗುಣವತಾಂ ಬಲಮ್ ॥ ೬೯ ॥**

ತಪಸ್ವಿಗಳಿಗೆ ತಪಸ್ಸೇ ಬಲವಾಗಿರುತ್ತದೆ. ವೇದವಿದರಿಗೆ ವೇದವೇ ಬಲವಾಗಿರುತ್ತದೆ. ದುಷ್ಟರಿಗೆ ಹಿಂಸೆಯೇ ಬಲವಾಗಿರುತ್ತದೆ. ಗುಣವಂತರಿಗೆ ಕ್ಷಮಾಗುಣವೇ ಬಲವಾಗಿರುತ್ತದೆ. ॥ ೬೯ ॥

**ಅಷ್ಟೌ ತಾನ್ಯವ್ರತಘ್ನಾನಿ ಆಪೋ ಮೂಲಂ ಫಲಂ ಪಯಃ ।**
**ಹವಿರ್ಬ್ರಾಹ್ಮಣಕಾಮ್ಯಾ ಚ ಗುರೋರ್ವಚನಮೌಷಧಮ್ ॥ ೭೦ ॥**

ನೀರು, ಗೆಡ್ಡೆಗೆಣಸುಗಳು, ಹಣ್ಣು, ಹಾಲು, ಹವಿಸ್ಸು, ಬ್ರಾಹ್ಮಣನ ಇಚ್ಛೆಯನ್ನು ಪೂರ್ತಿಗೊಳಿಸುವುದು, ಗುರುವಚನಪರಿಪಾಲನೆ ಮತ್ತು ಔಷಧ - ಈ ಎಂಟು ಅಂಶಗಳು ವ್ರತಕ್ಕೆ ವಿಘ್ನವನ್ನುಂಟು ಮಾಡತಕ್ಕವುಗಳಲ್ಲ. ॥ ೭೦ ॥

**ನ ತತ್ ಪರಸ್ಯ ಸಂದಧ್ಯಾತ್ ಪ್ರತಿಕೂಲಂ ಯದಾತ್ಮನಃ।**
**ಸಂಗ್ರಹೇಣೈಷ ಧರ್ಮಃ ಸ್ಯಾತ್ ಕಾಮಾದನ್ಯಃ ಪ್ರವರ್ತತೇ ॥ ೭೧ ॥**

ಯಾವುದು ತನಗೆ ಪ್ರತಿಕೂಲವನ್ನುಂಟು ಮಾಡುತ್ತದೆಯೋ, ಅದನ್ನು ಅನ್ಯರಿಗೂ ಉಂಟು ಮಾಡಬಾರದು. ಇದು ಧರ್ಮದ ಸ್ವರೂಪವಾಗಿದೆ. ಕಾಮನೆಯಿಂದಾಗಿ ಇದಕ್ಕೆ ವಿಪರೀತವಾದ ಪ್ರವೃತ್ತಿಯನ್ನು ಹೊಂದಿದರೆ ಅದು ಅಧರ್ಮವೆನಿಸಿಕೊಳ್ಳುತ್ತದೆ. ॥ ೭೧ ॥

**ಅಕ್ರೋಧೇನ ಜಯೇತ್ ಕ್ರೋಧಮಸಾಧುಂ ಸಾಧುನಾ ಜಯೇತ್ ।**
**ಜಯೇತ್ ಕದರ್ಯಂ ದಾನೇನ ಜಯೇತ್ ಸತ್ಯೇನ ಚಾನೃತಮ್ ॥ ೭೨ ॥**

ಅಕ್ರೋಧದಿಂದ ಕ್ರೋಧವನ್ನೂ, ಅಸದ್‌ವ್ಯವಹಾರವನ್ನು ಸದ್ವ್ಯವಹಾರಗಳಿಂದಲೂ, ಜಿಪುಣತನವನ್ನು ದಾನದಿಂದಲೂ, ಅಸತ್ಯವನ್ನು ಸತ್ಯದಿಂದಲೂ ಜಯಿಸಬೇಕು. ॥ ೭೨ ॥

**ಸ್ತ್ರೀಧೂರ್ತಕೇಽಲಸೇ ಭೀರೌ ಚಂಡೇ ಪುರುಷಮಾನಿನಿ।**
**ಚೌರೇ ಕೃತಘ್ನೇ ವಿಶ್ವಾಸೋ ನ ಕಾರ್ಯೋ ನ ಚ ನಾಸ್ತಿಕೇ ॥ ೭೩ ॥**

ಸ್ತ್ರೀ, ಧೂರ್ತ, ಸೋಮಾರಿ, ಭಯಗ್ರಸ್ತ, ಅತಿಕೋಪಿಷ್ಠ, ದುರಭಿಮಾನಿ, ಕಳ್ಳ, ಕೃತಘ್ನ ಹಾಗೂ ನಾಸ್ತಿಕನಲ್ಲಿ ಎಂದೂ ವಿಶ್ವಾಸವಿಡಬಾರದು. ॥ ೭೩ ॥

**ಅಭಿವಾದನಶೀಲಸ್ಯ ನಿತ್ಯಂ ವೃದ್ಧೋಪಸೇವಿನಃ।**
**ಚತ್ವಾರಿ ಸಂಪ್ರವರ್ಧಂತೇ ಕೀರ್ತಿರಾಯುರ್ಯಶೋ ಬಲಮ್ ॥ ೭೪ ॥**

ಯಾರು ಗುರುಜನರ ವಿಷಯದಲ್ಲಿ ಸದಾ ವಿನಮ್ರನಾಗಿರುವನೋ, ನಿತ್ಯವೂ ವೃದ್ಧರ ಸೇವೆಯಲ್ಲಿ ನಿರತನಾಗಿರುವನೋ - ಅವನ ಕೀರ್ತಿ, ಆಯುಷ್ಯ, ಯಶಸ್ಸು ಮತ್ತು ಬಲ - ಈ ನಾಲ್ಕೂ ದಿನದಿನಕ್ಕೂ ವೃದ್ಧಿಹೊಂದುತ್ತವೆ. ॥ ೭೪ ॥

**ಅತಿಕ್ಲೇಶೇನ ಯೇಽರ್ಥಾಃ ಸ್ಯುರ್ಧರ್ಮಸ್ಯಾತಿಕ್ರಮೇಣ ವಾ।**
**ಅರೇರ್ವಾ ಪ್ರಣಿಪಾತೇನ ಮಾ ಸ್ಮ ತೇಷು ಮನಃ ಕೃಥಾಃ ॥ ೭೫ ॥**

ಯಾವ ಧನವು ಅತ್ಯಂತ ಕಷ್ಟದಿಂದ, ಧರ್ಮಕ್ಕೆ ವಿರುದ್ಧವಾಗಿ ನಡೆಯುವುದರಿಂದ ಅಥವಾ ಶತ್ರುವಿಗೆ ಶರಣಾಗತನಾಗುವುದರಿಂದ ದೊರೆಯುತ್ತದೆಯೋ ಅಂತಹ ಧನದ

**ಅವಿದ್ಯಃ ಪುರುಷಃ ಶೋಚ್ಯಃ ಶೋಚ್ಯಂ ಮೈಥುನಮಪ್ರಜಮ್ ।**
**ನಿರಾಹಾರಾಃ ಪ್ರಜಾಃ ಶೋಚ್ಯಾಃ ಶೋಚ್ಯಂ ರಾಷ್ಟ್ರಮರಾಜಕಮ್ ॥ ೭೬ ॥**

ಅವಿದ್ಯಾವಂತನಾದ ಪುರುಷ, ಪುತ್ರಪ್ರಾಪ್ತಿರಹಿತವಾದ ಸ್ತ್ರೀಸಂಗ, ಆಹಾರವಿರದ ಪ್ರಜೆಗಳು ಹಾಗೂ ರಾಜನಿಲ್ಲದ ರಾಜ್ಯ - ಇವು ಶೋಚನೀಯವಾದವುಗಳು. ॥ ೭೬ ॥

**ಅಧ್ವಾ ಜರಾ ದೇಹವತಾಂ ಪರ್ವತಾನಾಂ ಜಲಂ ಜರಾ ।**
**ಅಸಂಭೋಗೋ ಜರಾ ಸ್ತ್ರೀಣಾಂ ವಾಕ್ಶಲ್ಯಂ ಮನಸೋ ಜರಾ ॥ ೭೭ ॥**

ಕಾಲ್ನಡಿಗೆಯ ಆಧಿಕ್ಯವೇ ದೇಹಧಾರಿಗಳಿಗೆ ದುಃಖಸ್ವರೂಪದ ಮುಪ್ಪು, ನಿರಂತರವಾಗಿ ಹರಿಯುವ ನೀರೇ ಪರ್ವತಗಳಿಗೆ ಮುಪ್ಪು, ರತಿಸುಖವಿಲ್ಲದಿರುವುದೇ ಸ್ತ್ರೀಯರಿಗೆ ಮುಪ್ಪು, ಶಲ್ಯರೂಪವಾದ ಮಾತುಗಳನ್ನು ಕೇಳುವುದೇ ಮನಸ್ಸಿಗೆ ಮುಪ್ಪು. ॥ ೭೭ ॥

**ಅನಾಮ್ನಾಯಮಲಾ ವೇದಾ ಬ್ರಾಹ್ಮಣಸ್ಯಾವ್ರತಂ ಮಲಮ್ ॥ ೭೮ ॥**
**ಮಲಂ ಪೃಥಿವ್ಯಾ ಬಾಹ್ಲೀಕಾಃ ಪುರುಷಸ್ಯಾನೃತಂ ಮಲಮ್ ।**
**ಕೌತೂಹಲಮಲಾ ಸಾಧ್ವೀ ವಿಪ್ರವಾಸಮಲಾಃ ಸ್ತ್ರಿಯಃ ॥ ೭೯ ॥**

ಅಭ್ಯಾಸ ಮಾಡದಿರುವುದೇ ವೇದದ ಮಾಲಿನ್ಯಕ್ಕೆ (ವಿಸ್ಮರಣೆಗೆ) ಕಾರಣವಾಗುತ್ತದೆ. ವ್ರತಾನುಷ್ಠಾನಗಳನ್ನು ಮಾಡದಿರುವುದರಿಂದ ಬ್ರಾಹ್ಮಣನು ಅಪವಿತ್ರನಾಗುತ್ತಾನೆ. ಬಾಹ್ಲೀಕ ದೇಶದ ಜನರು ಪೃಥ್ವಿಗೇ ಮಲರೂಪರಾಗಿದ್ದಾರೆ. ಮನುಷ್ಯನು ಸುಳ್ಳು ಹೇಳುವುದರಿಂದ ಮಲಿನತೆಯನ್ನು ಹೊಂದುತ್ತಾನೆ. ಕ್ರೀಡೆ, ಹಾಸ್ಯ-ಪರಿಹಾಸ್ಯಗಳಲ್ಲಿ ಉತ್ಸುಕತೆಯನ್ನು ತೋರಿಸುವುದೇ ಪತಿವ್ರತೆಯರಿಗೆ ಮಾಲಿನ್ಯವನ್ನುಂಟುಮಾಡುತ್ತದೆ. ಏಕಾಕಿನಿಯಾಗಿ ಪ್ರವಾಸ ಮಾಡುವುದೇ ಸ್ತ್ರೀಯರಿಗೆ ಮಾಲಿನ್ಯವನ್ನುಂಟುಮಾಡುತ್ತದೆ. ॥ ೭೮-೭೯ ॥

**ಸುವರ್ಣಸ್ಯ ಮಲಂ ರೂಪ್ಯಂ ರೂಪ್ಯಸ್ಯಾಪಿ ಮಲಂ ತ್ರಪು ।**
**ಜ್ಞೇಯಂ ತ್ರಪುಮಲಂ ಸೀಸಂ ಸೀಸಸ್ಯಾಪಿ ಮಲಂ ಮಲಮ್ ॥ ೮೦ ॥**

ಬೆಳ್ಳಿಯು ಸುವರ್ಣದ ಮೂಲರೂಪವಾಗಿದೆ. ತವರವು ಬೆಳ್ಳಿಯ ಮಲರೂಪವಾಗಿದೆ. ಸೀಸವು ತವರದ ಮಲರೂಪವಾಗಿದೆ. ಮಲವೇ (ಮೈಲುತುತ್ತ) ಸೀಸದ ಮಲವಾಗಿದೆ. ॥ ೮೦ ॥

**ನ ಸ್ವಪ್ನೇನ ಜಯೇನ್ನಿದ್ರಾಂ ನ ಕಾಮೇನ ಜಯೇತ್ ಸ್ತ್ರಿಯಃ ।**
**ನೇಂಧನೇನ ಜಯೇದಗ್ನಿಂ ನ ಪಾನೇನ ಸುರಾಂ ಜಯೇತ್ ॥ ೮೧ ॥**

ಸರ್ವದಾ ನಿದ್ದೆಮಾಡುತ್ತಾ ನಿದ್ರೆಯನ್ನು ಜಯಿಸಲಾಗದು. ಸ್ತ್ರೀಯರನ್ನು

ಕಾಮೋಪಭೋಗಗಳಿಂದ ಜಯಿಸಲಾಗುವುದಿಲ್ಲ. ಇಂಧನವನ್ನು ಒದಗಿಸುತ್ತಾ ಅಗ್ನಿಯನ್ನು ಜಯಿಸಲಾಗದು. ಅಧಿಕವಾಗಿ ಪಾನಮಾಡಿ ಸುರೆಯನ್ನು ಜಯಿಸುವ ಸಾಧ್ಯತೆಯಿಲ್ಲ. ॥ ೮೧ ॥

**ಯಸ್ಯ ದಾನಜಿತಂ ಮಿತ್ರಂ ಶತ್ರವೋ ಯುಧಿ ನಿರ್ಜಿತಾಃ ।**
**ಅನ್ನಪಾನಜಿತಾ ದಾರಾಃ ಸಫಲಂ ತಸ್ಯ ಜೀವಿತಮ್ ॥ ೮೨ ॥**

ಯಾವನು ದಾನದಿಂದ ತನ್ನ ಮಿತ್ರರನ್ನು ಜಯಿಸಿರುವನೋ, ಯುದ್ಧ ಮಾಡಿ ತನ್ನ ಶತ್ರುಗಳನ್ನು ಜಯಿಸಿರುವನೋ ಮತ್ತು ಯಾವನು ಅನ್ನ-ಪಾನ-ವಸ್ತ್ರಾದಿಗಳಿಂದ ಭಾರ್ಯೆಯನ್ನು ವಶಪಡಿಸಿಕೊಂಡಿರುವನೋ ಅಂತಹವನ ಜೀವನವು ಸುಖಮಯ-ವಾಗಿರುತ್ತದೆ. ॥ ೮೨ ॥

**ಸಹಸ್ರಿಣೋಽಪಿ ಜೀವಂತಿ ಜೀವಂತಿ ಶತಿನಸ್ತಥಾ ।**
**ಧೃತರಾಷ್ಟ್ರ ವಿಮುಂಚೇಚ್ಛಾಂ ನ ಕಥಂಚಿನ್ನ ಜೀವ್ಯತೇ ॥ ೮೩ ॥**

ಧೃತರಾಷ್ಟ್ರ ! ಸಾವಿರ ಸುವರ್ಣನಾಣ್ಯಗಳನ್ನು ಹೊಂದಿರುವವರೂ ಜೀವಿಸುತ್ತಾರೆ. ನೂರನ್ನು ಹೊಂದಿರುವವರೂ ಜೀವಿಸುತ್ತಾರೆ. ಆದುದರಿಂದ ದುರಾಸೆಯನ್ನು ದೂರಮಾಡು. ಎಲ್ಲರೂ ಹೇಗಾದರೂ ಜೀವಿಸಿಯೇ ತೀರುತ್ತಾರೆ. ॥ ೮೩ ॥

**ಯತ್ ಪೃಥಿವ್ಯಾಂ ವ್ರೀಹಿಯವಂ ಹಿರಣ್ಯಂ ಪಶವಃ ಸ್ತ್ರಿಯಃ ।**
**ನಾಲಮೇಕಸ್ಯ ತತ್ ಸರ್ವಮಿತಿ ಪಶ್ಯನ್ನ ಮುಹ್ಯತಿ ॥ ೮೪ ॥**

ಪೃಥ್ವಿಯಲ್ಲಿರುವ ಸಮಸ್ತವಾದ ಧಾನ್ಯ , ಸುವರ್ಣ, ಪಶುಗಳು ಮತ್ತು ಸ್ತ್ರೀಯರು – ಇವಿಷ್ಟೂ ಒಬ್ಬನಿಗೇ ಸಾಲದಾಗುತ್ತವೆ (ಆಶೆಗೆ ಮಿತಿಯಿಲ್ಲ) ಎಂಬುದನ್ನು ಮನದಟ್ಟು ಮಾಡಿಕೊಂಡವನು ಮೋಹಕ್ಕೆ ವಶನಾಗುವುದಿಲ್ಲ. ॥ ೮೪ ॥

**ರಾಜನ್ ಭೂಯೋ ಬ್ರವೀಮಿ ತ್ವಾಂ ಪುತ್ರೇಷು ಸಮಮಾಚರ ।**
**ಸಮತಾ ಯದಿ ತೇ ರಾಜನ್ ಸ್ವೇಷು ಪಾಂಡುಸುತೇಷು ವಾ ॥ ೮೫ ॥**

ರಾಜನೇ ! ಪುನಃ ನಿನಗೆ ಹೇಳುತ್ತೇನೆ. ನಿನಗೆ ಪಾಂಡುವಿನ ಮಕ್ಕಳ ಮೇಲೂ ಮತ್ತು ನಿನ್ನ ಮಕ್ಕಳ ಮೇಲೂ ಏಕರೂಪವಾದ ಪ್ರೀತಿಯಿರುವುದಾದರೆ ಪಾಂಡವ – ಕೌರವರಿಬ್ಬರಲ್ಲಿಯೂ ಒಂದೇ ವಿಧವಾದ ನೀತಿಯನ್ನನುಸರಿಸು. ॥ ೮೫ ॥

ಇತಿ ಶ್ರೀ ಮಹಾಭಾರತೇ ಉದ್ಯೋಗಪರ್ವಣಿ ಪ್ರಜಾಗರಪರ್ವಣಿ
ವಿದುರವಾಕ್ಯೇ ಏಕೋನಚತ್ವಾರಿಂಶೋಽಧ್ಯಾಯಃ ॥ ೩೯ ॥

# ಎಂಟನೇ ಅಧ್ಯಾಯ

ವಿದುರ ಉವಾಚ

ಯೋऽಭ್ಯರ್ಚಿತಃ ಸದ್ಭಿರಸಜ್ಜಮಾನಃ
ಕರೋತ್ಯರ್ಥಂ ಶಕ್ತಿಮಹಾಪಯಿತ್ವಾ।
ಕ್ಷಿಪ್ರಂ ಯಶಸ್ತಂ ಸಮುಪೈತಿ ಸಂತ-
ಮಲಂ ಪ್ರಸನ್ನಾ ಹಿ ಸುಖಾಯ ಸಂತಃ ॥ ೧ ॥

ವಿದುರನು ಹೇಳಿದನು -

ಯಾರು ಸತ್ಪುರುಷರಿಂದ ಗೌರವಿಸಲ್ಪಟ್ಟರೂ ಸಹ ನಿರಹಂಕಾರದಿಂದಿದ್ದು ತನ್ನ ಸಾಮರ್ಥ್ಯಕ್ಕೆ ಅನುಸಾರವಾಗಿ ಅರ್ಥಸಂಪಾದನೆಯನ್ನು ಮಾಡುತ್ತಿರುವನೋ ಅಂತಹ ಸತ್ಪುರುಷನನ್ನು ಯಶಸ್ಸು ಬಹುಬೇಗ ಬಂದು ಸೇರುತ್ತದೆ. ಏಕೆಂದರೆ ಸಂತರು ಯಾರ ಬಗ್ಗೆ ಪ್ರಸನ್ನರಾಗುತ್ತಾರೆಯೋ ಅವರು ಸದಾ ಸುಖಿಯಾಗಿರುತ್ತಾರೆ. ॥ ೧ ॥

ಮಹಾಂತಮಪ್ಯರ್ಥಮಧರ್ಮಯುಕ್ತಂ
ಯಃ ಸಂತ್ಯಜತ್ಯನಪಾಕೃಷ್ಟ ಏವ।
ಸುಖಂ ಸುದುಃಖಾನ್ಯವಮುಚ್ಯ ಶೇತೇ।
ಜೀರ್ಣಾಂ ತ್ವಚಂ ಸರ್ಪ ಇವಾವಮುಚ್ಯ ॥ ೨ ॥

ಅಧರ್ಮಯುಕ್ತವಾದ ಅತ್ಯಧಿಕವಾದ ಧನರಾಶಿಯನ್ನು ತೆಗೆದುಕೊಳ್ಳಲು ಯಾರೊಬ್ಬರ ಪ್ರತಿರೋಧವಿಲ್ಲದ ಸಮಯದಲ್ಲಿಯೂ ಸಹ, ಯಾರು ಕೇವಲ ಅಧರ್ಮದ ಹಣವೆಂಬ ಕಾರಣದಿಂದ ಪರಿತ್ಯಜಿಸುತ್ತಾನೆಯೋ ಅಂತಹವನು ಜೀರ್ಣವಾಗಿ ಹೋದ ಪೊರೆಯನ್ನು ಬಿಟ್ಟ ಹಾವಿನೋಪಾದಿಯಲ್ಲಿ - ಸಕಲವಿಧವಾದ ದುಃಖಗಳಿಂದಲೂ ಸಹ ವಿಮುಕ್ತನಾಗಿ ಸುಖವಾಗಿ ಮಲಗಿ ನಿದ್ರಿಸಬಲ್ಲನು. ॥ ೨ ॥

ಅನೃತೇ ಚ ಸಮುತ್ಕರ್ಷೋ ರಾಜಗಾಮಿ ಚ ಪೈಶುನಮ್।
ಗುರೋಶ್ಚಾಲೀಕನಿರ್ಬಂಧಃ ಸಮಾನಿ ಬ್ರಹ್ಮಹತ್ಯಯಾ ॥ ೩ ॥

ಸುಳ್ಳನ್ನು ಹೇಳಿ ಉನ್ನತಿಯನ್ನು ಹೊಂದುವುದು, ರಾಜನಲ್ಲಿ ಚಾಡಿಹೇಳುವುದು ಹಾಗೂ ಗುರುಗಳ ಬಗ್ಗೆಯೂ ಮಿಥ್ಯಾರೋಪಣೆ ಮಾಡಲು ಆಗ್ರಹಿಸುವುದು - ಈ ಮೂರೂ ಬ್ರಹ್ಮಹತ್ಯೆಗೆ ಸಮವಾದವುಗಳು. ॥ ೩. ॥

ಅಸೂಯೈಕಪದಂ ಮೃತ್ಯುರತಿವಾದಃ ಶ್ರಿಯೋ ವಧಃ।
ಅಶುಶ್ರೂಷಾ ತ್ವರಾ ಶ್ಲಾಘಾ ವಿದ್ಯಾಯಾಃ ಶತ್ರವಸ್ತ್ರಯಃ ॥ ೪ ॥

ಗುಣಗಳಲ್ಲಿ ದೋಷವನ್ನೆಣಿಸುವುದು (ಅಸೂಯೆ) ಮೃತ್ಯುವಿಗೆ ಸಮಾನವಾದುದು. ಕಠೋರವಾದ ಅಥವಾ ನಿಂದಾತ್ಮಕವಾದ ವಚನಗಳನ್ನಾಡುವುದು ಲಕ್ಷ್ಮಿಯನ್ನು (ಐಶ್ವರ್ಯ) ವಧಿಸಿದಂತೆ. ಕೇಳುವ ಇಚ್ಛೆಯ ಅಥವಾ ಸೇವೆಯ ಅಭಾವ, ಅತ್ಯವಸರ ಹಾಗೂ ಆತ್ಮಪ್ರಶಂಸೆ – ಈ ಮೂರೂ ವಿದ್ಯೆಗೆ ಶತ್ರುವಾಗಿವೆ. ॥ ೪ ॥

**ಆಲಸ್ಯಂ ಮದಮೋಹೌ ಚ ಚಾಪಲಂ ಗೋಷ್ಠಿರೇವ ಚ।**
**ಸ್ತಬ್ಧತಾ ಚಾಭಿಮಾನಿತ್ವಂ ತಥಾತ್ಯಾಗಿತ್ವಮೇವ ಚ।**
**ಏತೇ ವೈ ಸಪ್ತ ದೋಷಾಃ ಸ್ಯುಃ ಸದಾ ವಿದ್ಯಾರ್ಥಿನಾಂ ಮತಾಃ॥ ೫ ॥**

ಆಲಸ್ಯ, ಮದ, ಮೋಹ, ಚಪಲತೆ, ಸಲ್ಲದ ಹರಟೆ, ಉದ್ಧಟತನ, ದುರಭಿಮಾನ ಮತ್ತು ಸ್ವಾರ್ಥತೆ – ಈ ಏಳು ವಿದ್ಯಾರ್ಥಿಗಳಲ್ಲಿರಬಹುದಾದ ಮಹಾದೋಷಗಳು. ॥ ೫ ॥

**ಸುಖಾರ್ಥಿನಃ ಕುತೋ ವಿದ್ಯಾ ನಾಸ್ತಿ ವಿದ್ಯಾರ್ಥಿನಃ ಸುಖಮ್।**
**ಸುಖಾರ್ಥೀ ವಾ ತ್ಯಜೇದ್ ವಿದ್ಯಾಂ ವಿದ್ಯಾರ್ಥೀ ವಾ ತ್ಯಜೇತ್ ಸುಖಮ್ ॥ ೬ ॥**

ಸುಖವನ್ನು ಅಪೇಕ್ಷಿಸುವವನಿಗೆ ವಿದ್ಯೆಯೆಲ್ಲಿಯದು ? ವಿದ್ಯಾರ್ಥಿಗಳಾದವರಿಗೆ ಸುಖವೆಂಬುದಿಲ್ಲ. ಸುಖಾರ್ಥಿಯಾದವನು ವಿದ್ಯೆಯನ್ನಾದರೂ ಬಿಡಬೇಕು. ವಿದ್ಯಾರ್ಥಿಯಾದವನು ಸುಖವನ್ನಾದರೂ ಪರಿತ್ಯಜಿಸಬೇಕು. ॥ ೬ ॥

**ನಾಗ್ನಿಸ್ತೃಪ್ಯತಿ ಕಾಷ್ಠಾನಾಂ ನಾಪಗಾನಾಂ ಮಹೋದಧಿಃ।**
**ನಾಂತಕಃ ಸರ್ವಭೂತಾನಾಂ ನ ಪುಂಸಾಂ ವಾಮಲೋಚನಾ ॥ ೭ ॥**

ರಾಶಿ ಸೌದೆಗಳಿಂದಲೂ ಅಗ್ನಿಯು ತೃಪ್ತನಾಗುವುದಿಲ್ಲ. ಹಲವಾರು ನದಿಗಳಿಂದಲೂ ಸಮುದ್ರವು ತೃಪ್ತವಾಗುವುದಿಲ್ಲ. ಸಮಸ್ತಪ್ರಾಣಿಗಳಿಂದಲೂ ಮೃತ್ಯುದೇವತೆಯು ತೃಪ್ತನಾಗುವುದಿಲ್ಲ. ಕುಲಟೆಯಾದ ಸ್ತ್ರೀಯು ಪುರುಷರಿಂದ ಎಂದೂ ತೃಪ್ತಳಾಗುವುದಿಲ್ಲ. ॥ ೭ ॥

**ಆಶಾ ಧೃತಿಂ ಹಂತಿ ಸಮೃದ್ಧಿಮಂತಕಃ**
**ಕ್ರೋಧಃ ಶ್ರಿಯಂ ಹಂತಿ ಯಶಃ ಕದರ್ಯತಾ।**
**ಅಪಾಲನಂ ಹಂತಿ ಪಶೂಂಶ್ಚ ರಾಜ-**
**ನ್ನೇಕಃ ಕ್ರುದ್ಧೋ ಬ್ರಾಹ್ಮಣೋ ಹಂತಿ ರಾಷ್ಟ್ರಮ್ ॥ ೮ ॥**

ಆಶೆಯೆಂಬುದು ಧೈರ್ಯವನ್ನೂ, ಯಮರಾಜನು ಸಮೃದ್ಧಿಯನ್ನೂ, ಕೋಪವು ಸಂಪತ್ತನ್ನೂ, ಕೃಪಣತೆಯು ಯಶಸ್ಸನ್ನೂ, ಸರಿಯಾಗಿ ಪಾಲನೆ – ಪೋಷಣೆ ಮಾಡದಿರುವುದು ಪಶುಗಳನ್ನೂ ನಾಶಮಾಡಿಬಿಡುತ್ತದೆ. ಕೋಪಗೊಂಡ ಬ್ರಾಹ್ಮಣನು

**ಅಜಾಶ್ಚ ಕಾಂಸ್ಯಂ ರಜತಂ ಚ ನಿತ್ಯಂ**
**ಮಧ್ವಾಕರ್ಷಃ ಶಕುನಿಃ ಶ್ರೋತ್ರಿಯಶ್ಚ।**
**ವೃದ್ಧೋ ಜ್ಞಾತಿರವಸನ್ನಃ ಕುಲೀನ**
**ಏತಾನಿ ತೇ ಸಂತು ಗೃಹೇ ಸದೈವ ॥ ೯ ॥**

ಆಡು, ಕಂಚು, ಬೆಳ್ಳಿ, ಜೇನುತುಪ್ಪ, ವಿಷವನ್ನು ಹೀರುವ ಔಷಧ, ಪಕ್ಷಿ ಶ್ರೋತ್ರಿಯನಾದ ಬ್ರಾಹ್ಮಣ, ವೃದ್ಧ ಹಾಗೂ ಆಪತ್ತಿಗೊಳಗಾಗಿರುವ ಬಂಧು – ಈ ಎಲ್ಲವೂ ನಿನ್ನ ಮನೆಯಲ್ಲಿ ಯಾವಾಗಲೂ ಸ್ಥಿರವಾಗಿರಲಿ. ॥ ೯ ॥

**ಅಜೋಕ್ಷಾ ಚಂದನಂ ವೀಣಾ ಆದರ್ಶೋ ಮಧುಸರ್ಪಿಷೀ।**
**ವಿಷಮೌದುಂಬರಂ ಶಂಖಃ ಸ್ವರ್ಣನಾಭೋಽಥ ರೋಚನಾ ॥ ೧೦ ॥**
**ಗೃಹೇ ಸ್ಥಾಪಯಿತವ್ಯಾನಿ ಧನ್ಯಾನಿ ಮನುರಬ್ರವೀತ್।**
**ದೇವಬ್ರಾಹ್ಮಣಪೂಜಾರ್ಥಮತಿಥೀನಾಂ ಚ ಭಾರತ ॥ ೧೧ ॥**

ಆಡು, ಎತ್ತು, ಚಂದನ, ವೀಣೆ, ಕನ್ನಡಿ, ಜೇನುತುಪ್ಪ, ತುಪ್ಪ, ಶುದ್ಧೋದಕ, ತಾಮ್ರಪಾತ್ರೆ, ಬಲಮುರಿ ಶಂಖ, ಶಾಲಗ್ರಾಮ ಮತ್ತು ಗೋರೋಚನ – ಈ ಶ್ಲಾಘ್ಯವಾದ ವಸ್ತುಗಳು ದೇವ, ಬ್ರಾಹ್ಮಣರ ಮತ್ತು ಅತಿಥಿಗಳ ಪೂಜೆಗಾಗಿ ಗೃಹಸ್ಥನಾದವನ ಮನೆಯಲ್ಲಿ ಸರ್ವಕಾಲದಲ್ಲಿಯೂ ಇರಬೇಕೆಂದು ಮನುವು ಹೇಳಿದ್ದಾನೆ. ॥ ೧೦ – ೧೧ ॥

**ಇದಂ ಚ ತ್ವಾಂ ಸರ್ವಪರಂ ಬ್ರವೀಮಿ**
**ಪುಣ್ಯಂ ಪದಂ ತಾತ ಮಹಾವಿಶಿಷ್ಟಮ್।**
**ನ ಜಾತು ಕಾಮಾನ್ನ ಭಯಾನ್ನ ಲೋಭಾದ್**
**ಧರ್ಮಂ ಜಹ್ಯಾಜ್ಜೀವಿತಸ್ಯಾಪಿ ಹೇತೋಃ ॥ ೧೨ ॥**

ತಾತ ! ಸರ್ವಶ್ರೇಷ್ಠವಾದ, ಮಹತ್ತ್ವಪೂರ್ಣವಾದ, ಎಲ್ಲಕ್ಕಿಂತಲೂ ಹೆಚ್ಚು ಪುಣ್ಯಪ್ರದವಾದ, ಮಹಾತತ್ತ್ವವಿಶಿಷ್ಟವಾದ ಮಾತನ್ನು ನಿನಗೆ ಹೇಳುವೆ – ಯಾವುದೇ ಅಪೇಕ್ಷೆಯಿಂದಾಗಲೀ, ಭಯದಿಂದಾಗಲೀ, ಲೋಭದಿಂದಾಗಲೀ ಅಥವಾ ಜೀವನಕ್ಕಾಗಿಯಾದರೂ ಎಂದೂ ಧರ್ಮವನ್ನು ಬಿಡಬಾರದು. ॥ ೧೨ ॥

**ನಿತ್ಯೋ ಧರ್ಮಃ ಸುಖದುಃಖೇ ತ್ವನಿತ್ಯೇ**
**ಜೀವೋ ನಿತ್ಯೋ ಹೇತುರಸ್ಯ ತ್ವನಿತ್ಯಃ।**
**ತ್ಯಕ್ತ್ವಾನಿತ್ಯಂ ಪ್ರತಿತಿಷ್ಠಸ್ವ ನಿತ್ಯೇ**
**ಸಂತುಷ್ಯ ತ್ವಂ ತೋಷಪರೋ ಹಿ ಲಾಭಃ ॥ ೧೩ ॥**

ಧರ್ಮವು ನಿತ್ಯವಾದುದು, ಸುಖ ದುಃಖಗಳು ಶಾಶ್ವತವಲ್ಲ. ಜೀವ ನಿತ್ಯವಾದುದು, ಅದಕ್ಕೆ ಕಾರಣವಾದ ಉಪಕರಣಗಳು (ಶರೀರಾದಿ) ನಿತ್ಯವಲ್ಲ ಆದುದರಿಂದ ಅನಿತ್ಯವಾದುದನ್ನು ಕಡೆಗಣಿಸಿ ನಿತ್ಯವಾದ ಧರ್ಮದಲ್ಲಿ ಪ್ರತಿಷ್ಠಿತನಾಗ ನಿತ್ಯತೃಪ್ತನಾಗಿರು. ನಿತ್ಯತೃಪ್ತಿಯೇ ಪರಮಶ್ರೇಷ್ಠವಾದ ಲಾಭವಾಗಿರುತ್ತದೆ. ॥ ೧೩ ॥

**ಮಹಾಬಲಾನ್ ಪಶ್ಯ ಮಹಾನುಭಾವಾನ್**
**ಪ್ರಶಾಸ್ಯ ಭೂಮಿಂ ಧನಧಾನ್ಯಪೂರ್ಣಾಮ್ ।**
**ರಾಜ್ಯಾನಿ ಹಿತ್ವಾ ವಿಪುಲಾಂಶ್ಚ ಭೋಗಾನ್**
**ಗತಾನ್ನರೇಂದ್ರಾನ್ ವಶಮಂತಕಸ್ಯ ॥ ೧೪ ॥**

ಧನ-ಧಾನ್ಯ ಸಮೃದ್ಧವಾದ ಈ ಭೂಮಿಯನ್ನು ಅನೇಕವರ್ಷಗಳವರೆಗೆ ಆಳಿ ಅನಂತರದಲ್ಲಿ ಸಮಸ್ತ ರಾಜ್ಯ ಹಾಗೂ ವಿಪುಲವಾದ ಸುಖೋಪಭೋಗಗಳನ್ನು ಇಲ್ಲಿಯೇ ಬಿಟ್ಟು ಯಮರಾಜನ ವಶರಾಗಿ ಹೋದ ಮಹಾಬಲರಾಗಿದ್ದ ಹಾಗು ಮಹಾನುಭಾವರಾಗಿದ್ದ ರಾಜರುಗಳ ಕಡೆಗೆ ದೃಷ್ಟಿಹರಿಸು. ॥ ೧೪ ॥

**ಮೃತಂ ಪುತ್ರಂ ದುಃಖಪುಷ್ಟಂ ಮನುಷ್ಯಾ**
**ಉತ್ಕ್ಷಿಪ್ಯ ರಾಜನ್ ಸ್ವಗೃಹಾನ್ನಿರ್ಹರಂತಿ ।**
**ತಂ ಮುಕ್ತಕೇಶಾಃ ಕರುಣಂ ರುದಂತಿ**
**ಚಿತಾಮಧ್ಯೇ ಕಾಷ್ಠಮಿವ ಕ್ಷಿಪಂತಿ ॥ ೧೫ ॥**

ಬಹಳ ಕಷ್ಟಪಟ್ಟು ಸಾಕಿರುವ ಮಗನು ಆಕಸ್ಮಿಕವಾಗಿ ಪ್ರಾಣತೊರೆದರೆ ಒಡನೆಯೆ ಆತನನ್ನು ಮನೆಯಿಂದ ಹೊರಗೆ ತೆಗೆದುಕೊಂಡು ಹೋಗುತ್ತಾರೆ. ಮೊದಲ ಅವನಿಗಾಗಿ ಎಲ್ಲರೂ ಗೋಳಿನಿಂದ ಅಳುತ್ತಾರಾದರೂ ಅನಂತರ ಉರಿಯುತ್ತಿರುವ ಚಿತೆಯಲ್ಲಿ ಕಟ್ಟಿಗೆಯನ್ನು ಹಾಕುವಂತೆ ಹಾಕಿಬಿಡುತ್ತಾರೆ. ॥ ೧೫ ॥

**ಅನ್ಯೋ ಧನಂ ಪ್ರೇತಗತಸ್ಯ ಭುಂಕ್ತೇ**
**ವಯಾಂಸಿ ಚಾಗ್ನಿಶ್ಚ ಶರೀರಧಾತೂನ್ ।**
**ದ್ವಾಭ್ಯಾಮಯಂ ಸಹ ಗಚ್ಛತ್ಯಮುತ್ರ**
**ಪುಣ್ಯೇನ ಪಾಪೇನ ಚ ವೇಷ್ಟ್ಯಮಾನಃ ॥ ೧೬ ॥**

ಸತ್ತುಹೋದವನ ಹಣವನ್ನು ಬೇರೆಯವರು ಉಪಭೋಗಿಸುತ್ತಾರೆ. ಶರೀರದ ಮಾಂಸಧಾತುಗಳನ್ನು ಅಗ್ನಿ ಅಥವಾ ಪಕ್ಷಿಗಳು ತಿನ್ನುತ್ತವೆ. ಪ್ರೇತಗತನಾದವನನ್ನು ಪುಣ್ಯ-ಪಾಪಗಳು ಮಾತ್ರವೇ ಹಿಂಬಾಲಿಸಿ ಅವನೊಡನೆ ಪರಲೋಕವನ್ನು ಸೇರುತ್ತವೆ. ॥ ೧೬ ॥

**ಉತ್ಸೃಜ್ಯ ವಿನಿವರ್ತಂತೇ ಜ್ಞಾತಯಃ ಸುಹೃದಃ ಸುತಾಃ ।**

ಮಹಾರಾಜ ! ಮನುಷ್ಯನು ಗತಪ್ರಾಣನಾದೊಡನೆಯೇ ಒಡಹುಟ್ಟಿದವರು, ಸ್ನೇಹಿತರು, ಮಕ್ಕಳು ಎಲ್ಲರೂ ಸಹ - ಪಕ್ಷಿಗಳು ಫಲಪುಷ್ಪರಹಿತವಾದ ವೃಕ್ಷಗಳನ್ನು ತ್ಯಜಿಸಿ ಹೋಗುವಂತೆ - ಶ್ಮಶಾನದಲ್ಲಿನ ಚಿತೆಯಲ್ಲಿ ಬಿಸುಟು ಹೊರಟು ಹೋಗುತ್ತಾರೆ. ॥ ೧೭ ॥

**ಅಗ್ನೌ ಪ್ರಾಸ್ತಂ ತು ಪುರುಷಂ ಕರ್ಮಾನ್ವೇತಿ ಸ್ವಯಂಕೃತಮ್ ।**
**ತಸ್ಮಾತ್ತು ಪುರುಷೋ ಯತ್ನಾದ್ ಧರ್ಮಂ ಸಂಚಿನುಯಾಚ್ಛನೈಃ ॥ ೧೮ ॥**

ಅಗ್ನಿಯಲ್ಲಿ ವಿಸರ್ಜಿಸಲ್ಪಟ್ಟ ಮನುಷ್ಯನನ್ನು ಅವನೇ ಮಾಡಿದ ಕರ್ಮಫಲಗಳು ಮಾತ್ರ ಅನುಸರಿಸಿ ಹೋಗುತ್ತವೆ. ಆದ್ದರಿಂದ ಮನುಷ್ಯನು ಪ್ರಯತ್ನ ಪೂರ್ವಕವಾಗಿ ಸ್ವಲ್ಪ ಸ್ವಲ್ಪವಾಗಿಯೇ ಧರ್ಮಸಂಚಯವನ್ನು ಮಾಡಬೇಕು. ॥ ೧೮ ॥

**ಅಸ್ಮಾಲ್ಲೋಕಾದೂರ್ಧ್ವಮಮುಷ್ಯ ಚಾಧೋ**
**ಮಹತ್ತಮಸ್ತಿಷ್ಠತಿ ಹ್ಯಂಧಕಾರಮ್ ।**
**ತದ್ ವೈ ಮಹಾಮೋಹನಮಿಂದ್ರಿಯಾಣಾಂ**
**ಬುಧ್ಯಸ್ವ ಮಾ ತ್ವಾಂ ಪ್ರಲಭೇತ ರಾಜನ್ ॥ ೧೯ ॥**

ಈ ಲೋಕ ಹಾಗೂ ಪರಲೋಕದ ಮೇಲ್ಭಾಗ ಹಾಗೂ ಕೆಳಭಾಗದೆಲ್ಲೆಡೆ ಅಜ್ಞಾನರೂಪವಾದ ಮಹಾ ಅಂಧಕಾರವು ಕವಿದಿದೆ. ಅದು ಇಂದ್ರಿಯಗಳಿಗೆ ಮಹತ್ತರವಾದ ಭ್ರಾಂತಿಯನ್ನುಂಟು ಮಾಡುತ್ತದೆ. ರಾಜನೇ ! ನೀನಿದನ್ನು ಅರಿಯುವಂತಹವನಾಗು. ಅಂತಹ ಮಹಾಮೋಹವು ನಿನ್ನನ್ನು ಆವರಿಸದಿರಲಿ. ॥ ೧೯ ॥

**ಇದಂ ವಚಃ ಶಕ್ಷ್ಯಸಿ ಚೇದ್ ಯಥಾವ-**
**ನ್ನಿಶಮ್ಯ ಸರ್ವಂ ಪ್ರತಿಪತ್ತುಮೇವ ।**
**ಯಶಃ ಪರಂ ಪ್ರಾಪ್ಸ್ಯಸಿ ಜೀವಲೋಕೇ**
**ಭಯಂ ನ ಚಾಮುತ್ರ ನ ಚೇಹ ತೇಽಸ್ತಿ ॥ ೨೦ ॥**

ನಾನು ಹೇಳಿದ ಈ ಮಾತುಗಳನ್ನು ಕೇಳಿ, ಗ್ರಹಿಸಿ ಅದರಂತೆ ನಡೆದುಕೊಂಡೆಯಾದರೆ ನೀನು ಈ ಜೀವಲೋಕದಲ್ಲಿ ಅಪಾರವಾದ ಯಶಸ್ಸನ್ನು ಗಳಿಸುವೆ. ನೀನು ಈ ಲೋಕದಲ್ಲಿಯಾಗಲೀ ಪರಲೋಕದ ವಿಷಯದಲ್ಲಿಯಾಗಲೀ ಭಯಪಡಬೇಕಾದ ಯಾವ ಕಾರಣವೂ ಇರುವುದಿಲ್ಲ. ॥ ೨೦ ॥

**ಆತ್ಮಾ ನದೀ ಭಾರತ ಪುಣ್ಯತೀರ್ಥಾ**
**ಸತ್ಯೋದಕಾ ಧೃತಿಕೂಲಾ ದಯೋರ್ಮಿಃ ।**
**ತಸ್ಯಾಂ ಸ್ನಾತಃ ಪೂಯತೇ ಪುಣ್ಯಕರ್ಮಾ**
**ಪುಣ್ಯೋ ಹ್ಯಾತ್ಮಾ ನಿತ್ಯಮಲೋಭ ಏವ ॥ ೨೧ ॥**

ಭಾರತ ! ಈ ಜೀವಾತ್ಮ ಒಂದು ನದಿಯಂತೆ. ಪುಣ್ಯವೆಂಬುದು ಅದರಲ್ಲಿಯ ತೀರ್ಥ.

ಸತ್ಯವೇ ಅದರ ನೀರು. ಧೈರ್ಯವೇ ಅದರ ದಡವು. ದಯೆಯೇ ಆ ನದಿಯ ಅಲೆಯಾಗಿ; ಇಂತಹ ಆತ್ಮನದಿಯಲ್ಲಿ ಸ್ನಾನಮಾಡುವ ಪುಣ್ಯಕರ್ಮಿಯಾದ ಮಾನವನು ಪವಿತ್ರನಾಗುತ್ತಾ; ಏಕೆಂದರೆ ಲೋಭರಹಿತನಾದ ಆತ್ಮನು ಸದಾ ಪವಿತ್ರನಾಗಿರುತ್ತಾನೆ. ॥ ೨೧ ॥

**ಕಾಮಕ್ರೋಧಗ್ರಾಹವತೀಂ ಪಂಚೇಂದ್ರಿಯಜಲಾಂ ನದೀಮ್ ।**
**ನಾವಂ ಧೃತಿಮಯೀಂ ಕೃತ್ವಾ ಜನ್ಮದುರ್ಗಾಣಿ ಸಂತರ ॥ ೨೨ ॥**

ಕಾಮ-ಕ್ರೋಧಗಳೆಂಬ ಮೊಸಳೆಗಳಿಂದ ಕೂಡಿದ, ಐದು ಇಂದ್ರಿಯಗಳೆಂ; ಜಲದಿಂದ ಪೂರ್ಣವಾಗಿರುವ ಈ ಸಂಸಾರನದಿಯ ಜನ್ಮ - ಮರಣರೂಪವಾ; ದುರ್ಗಮ ಪ್ರವಾಹವನ್ನು ಧೈರ್ಯವೆಂಬ ನಾವೆಯಿಂದ ದಾಟುವವನಾಗು. ॥ ೨೨ ॥

**ಪ್ರಜ್ಞಾವೃದ್ಧಂ ಧರ್ಮವೃದ್ಧಂ ಸ್ವಬಂಧುಂ**
**ವಿದ್ಯಾವೃದ್ಧಂ ವಯಸಾ ಚಾಪಿ ವೃದ್ಧಮ್ ।**
**ಕಾರ್ಯಾಕಾರ್ಯೇ ಪೂಜಯಿತ್ವಾ ಪ್ರಸಾದ್ಯ**
**ಯಃ ಸಂಪೃಚ್ಛೇನ್ನ ಸ ಮುಹ್ಯೇತ್ ಕದಾಚಿತ್ ॥ ೨೩ ॥**

ಯಾರು ಬುದ್ಧಿ ಧರ್ಮ, ವಿದ್ಯೆ ಹಾಗೂ ವಯಸ್ಸಿನಲ್ಲಿ ವೃದ್ಧರಾದ ತ; ಬಂಧುವನ್ನು ಗೌರವಿಸಿ ಸತ್ಕರಿಸಿ ಪ್ರಸನ್ನನಾಗಿ ಮಾಡಿಕೊಂಡು, ಕಾರ್ಯಾಕಾರ್ಯಗ; ವಿಷಯದಲ್ಲಿ ಪ್ರಶ್ನಿಸಿ, ಅದರಂತೆ ನಡೆದುಕೊಳ್ಳುವನೋ ಅಂತಹವನು ಎಂತಹ ಆಪತ್ಕಾಲದಲ್ಲಿಯೂ ಸಹ ಧೃತಿಗೆಡುವುದಿಲ್ಲ. ॥ ೨೩ ॥

**ಧೃತ್ಯಾ ಶಿಶ್ನೋದರಂ ರಕ್ಷೇತ್ ಪಾಣಿಪಾದಂ ಚ ಚಕ್ಷುಷಾ ।**
**ಚಕ್ಷುಃ ಶ್ರೋತ್ರೇ ಚ ಮನಸಾ ಮನೋ ವಾಚಂ ಚ ಕರ್ಮಣಾ ॥ ೨೪ ॥**

ಕಾಮಾಗ್ನಿ, ಜಠರಾಗ್ನಿಗಳ ಬೇಗೆಯನ್ನು ಧೈರ್ಯದಿಂದ ರಕ್ಷಿಸಬೇಕು. ಕೈಕಾಲುಗಳಿ; ತೊಂದರೆಯಾಗದಂತೆ ರಕ್ಷಿಸಿಕೊಳ್ಳಲು ಕಣ್ಣಿನಿಂದ ಮಾತ್ರ ಸಾಧ್ಯ. ಕಣ್ಣು ಹಾಗೂ ಕಿವಿಗಳು ಕೆಡದಂತೆ ನೋಡಿಕೊಳ್ಳಲು ಸುಸಂಸ್ಕೃತವಾದ ಮನಸ್ಸು ಬೇಕಿದೆ. ಮನಸ್ಸನ್ನು ಸುಸಂಸ್ಕೃತವಾಗಿಸಲು ಸತ್ಕರ್ಮ ಹಾಗೂ ಸತ್ಸಹವಾಸಗಳಿಂದಲೇ ಸಾಧ್ಯ. ॥ ೨೪ ॥

**ನಿತ್ಯೋದಕೀ ನಿತ್ಯಯಜ್ಞೋಪವೀತೀ**
**ನಿತ್ಯಸ್ವಾಧ್ಯಾಯೀ ಪತಿತಾನ್ನವರ್ಜೀ ।**
**ಸತ್ಯಂ ಬ್ರುವನ್ ಗುರವೇ ಕರ್ಮ ಕುರ್ವನ್**
**ನ ಬ್ರಾಹ್ಮಣಶ್ಚ್ಯವತೇ ಬ್ರಹ್ಮಲೋಕಾತ್ ॥ ೨೫ ॥**

ಯಾವನು ಅನುದಿನವೂ ಸ್ನಾನ - ಸಂಧ್ಯಾ - ತರ್ಪಣಾದಿಗಳನ್ನು

ಅನುದಿನವೂ ಅಧ್ಯಯನ-ಅಧ್ಯಾಪನಗಳಲ್ಲಿ ನಿರತನಾಗಿರುತ್ತಾನೆಯೋ, ಪತಿತರ ಅನ್ನವನ್ನು ಪರಿತ್ಯಜಿಸುತ್ತಾನೆಯೋ, ಸತ್ಯನಿಷ್ಠನಾಗಿರುತ್ತಾ ಗುರುವಿನ ಸೇವೆಯಲ್ಲಿ ನಿರತನಾಗಿರುತ್ತಾನೆಯೋ - ಅಂತಹ ಬ್ರಾಹ್ಮಣನು ಎಂದೂ ಬ್ರಹ್ಮಲೋಕದಿಂದ ಚ್ಯುತನಾಗುವುದಿಲ್ಲ. ॥ ೨೫ ॥

**ಅಧೀತ್ಯ ವೇದಾನ್ ಪರಿಸಂಸ್ತೀರ್ಯ ಚಾಗ್ನೀ-**
**ನಿಷ್ಟ್ವಾ ಯಜ್ಞೈಃ ಪಾಲಯಿತ್ವಾ ಪ್ರಜಾಶ್ಚ।**
**ಗೋಬ್ರಾಹ್ಮಣಾರ್ಥಂ ಶಸ್ತ್ರಪೂತಾಂತರಾತ್ಮಾ**
**ಹತಃ ಸಂಗ್ರಾಮೇ ಕ್ಷತ್ರಿಯಃ ಸ್ವರ್ಗಮೇತಿ ॥ ೨೬ ॥**

ವೇದಾಧ್ಯಯನವನ್ನು ಮಾಡಿ, ಅಗ್ನಿಹೋತ್ರಕ್ಕಾಗಿ ಯಜ್ಞೇಶ್ವರನ ಸುತ್ತಲೂ ದರ್ಭೆಯಿಂದ ಪರಿಸ್ತರಣವನ್ನು ಯಥಾವಿಧಿಯಾಗಿ ಹಾಕಿ, ಅನೇಕವಿಧವಾದ ಯಜ್ಞಗಳ ಮೂಲಕ ಅಗ್ನಿಯನ್ನು ಸಂಪೂಜಿಸುತ್ತಾ ಪ್ರಜಾಪಾಲನೆ ಮಾಡುತ್ತಾ, ಗೋಬ್ರಾಹ್ಮಣರ ರಕ್ಷಣೆಯಲ್ಲಿ ಪ್ರಾಪ್ತವಾಗಬಹುದಾದ ಶಸ್ತ್ರಾಘಾತದಿಂದ ಪರಿಶುದ್ಧವಾದ ಅಂತರಾತ್ಮವುಳ್ಳ ಕ್ಷತ್ರಿಯನು ಯುದ್ಧದಲ್ಲಿ ಹತನಾಗಿ ವೀರಸ್ವರ್ಗಕ್ಕೆ ಹೋಗುತ್ತಾನೆ. ॥ ೨೬ ॥

**ವೈಶ್ಯೋಽಧೀತ್ಯ ಬ್ರಾಹ್ಮಣಾನ್ ಕ್ಷತ್ರಿಯಾಂಶ್ಚ**
**ಧನೈಃ ಕಾಲೇ ಸಂವಿಭಜ್ಯಾಶ್ರಿತಾಂಶ್ಚ।**
**ತ್ರೇತಾಪೂತಂ ಧೂಮಮಾಘ್ರಾಯ ಪುಣ್ಯಂ**
**ಪ್ರೇತ್ಯ ಸ್ವರ್ಗೇ ದಿವ್ಯಸುಖಾನಿ ಭುಂಕ್ತೇ ॥ ೨೭ ॥**

ವೈಶ್ಯನಾದವನು ವೇದ-ಶಾಸ್ತ್ರಗಳನ್ನು ಅಧ್ಯಯನ ಮಾಡಿ, ಸಂಪಾದಿಸಿದ ಹಣವನ್ನು ಬ್ರಾಹ್ಮಣರಿಗೂ, ಕ್ಷತ್ರಿಯರಿಗೂ ಹಾಗೂ ತನ್ನನ್ನಾಶ್ರಯಿಸಿದವರಿಗೂ ಯಥಾಯೋಗ್ಯವಾಗಿ ಹಂಚಿಕೊಡುತ್ತಾ, ಅಗ್ನಿತ್ರಯಗಳಿಂದ ಪವಿತ್ರವಾಗಿ ಮಾಡಲ್ಪಟ್ಟ ಪುಣ್ಯತಮವಾದ ಧೂಮವನ್ನು ಆಘ್ರಾಣಿಸುತ್ತಾ ಬದುಕಿದಲ್ಲಿ, ಅವಸಾನಾನಂತರ ಸ್ವರ್ಗಲೋಕದಲ್ಲಿ ದಿವ್ಯಸುಖಗಳನ್ನು ಅನುಭವಿಸುತ್ತಾನೆ. ॥ ೨೭ ॥

**ಬ್ರಹ್ಮ ಕ್ಷತ್ರಂ ವೈಶ್ಯವರ್ಣಂ ಚ ಶೂದ್ರಃ**
**ಕ್ರಮೇಣೈತಾನ್ನ್ಯಾಯತಃ ಪೂಜಯಾನಃ।**
**ತುಷ್ಟೇಷ್ವೇತೇಷ್ವವ್ಯಥೋ ದಗ್ಧಪಾಪ-**
**ಸ್ತ್ಯಕ್ತ್ವಾ ದೇಹಂ ಸ್ವರ್ಗಸುಖಾನಿ ಭುಂಕ್ತೇ ॥ ೨೮ ॥**

ಶೂದ್ರನು, ಬ್ರಹ್ಮ-ಕ್ಷತ್ರಿಯ ಹಾಗೂ ವೈಶ್ಯರ ಸೇವೆಯನ್ನು ಅನುಕ್ರಮವಾಗಿ ನ್ಯಾಯಪೂರ್ವಕವಾಗಿ ಮಾಡಿ ಅವರನ್ನು ತುಷ್ಟಿಪಡಿಸಿದರೆ, ಆತನು ಪಾಪದಿಂದ ವಿಮುಕ್ತನಾಗಿ ದೇಹತ್ಯಾಗಾನಂತರ ಸ್ವರ್ಗಸುಖವನ್ನು ಅನುಭವಿಸುತ್ತಾನೆ. ॥ ೨೮ ॥

**ಚಾತುರ್ವರ್ಣ್ಯಸ್ಯೈಷ ಧರ್ಮಸ್ತ್ವೋಕ್ತೋ**
**ಹೇತುಂ ಚಾನುಬ್ರುವತೋ ಮೇ ನಿಬೋಧ।**
**ಕ್ಷಾತ್ರಾದ್ ಧರ್ಮಾದ್ಧೀಯತೇ ಪಾಂಡುಪುತ್ರ-**
**ಸ್ತಂ ತ್ವಂ ರಾಜನ್ ರಾಜಧರ್ಮೇ ನಿಯುಂಕ್ಷ್ವ॥ ೨೯ ॥**

ಮಹಾರಾಜ ! ನಿನ್ನ ಬಳಿ ನಾನು ನಾಲ್ಕೂ ವರ್ಣಗಳ ಧರ್ಮವೇನೆಂಬುದನ್ನು ತಿಳಿಸಿರುವೆ. ಇದನ್ನು ಹೇಳಿದ ಕಾರಣವನ್ನೂ ಹೇಳುವೆ ಕೇಳು ! ನಿನ್ನ ಕಾರಣದಿಂದಾಗಿ ಪಾಂಡುಪುತ್ರನಾದ ಯುಧಿಷ್ಠಿರನು ತನ್ನ ಕ್ಷಾತ್ರಧರ್ಮದಿಂದ ಚ್ಯುತನಾಗಿರುವನು ರಾಜನೇ ! ಅವನನ್ನು ನೀನು ರಾಜಧರ್ಮದಲ್ಲಿ ನಿಯೋಜಿಸುವವನಾಗು. ॥ ೨೯ ॥

**ಧೃತರಾಷ್ಟ್ರ ಉವಾಚ**

**ಏವಮೇತದ್ ಯಥಾ ತ್ವಂ ಮಾಮನುಶಾಸಸಿ ನಿತ್ಯದಾ।**
**ಮಮಾಪಿ ಚ ಮತಿಃ ಸೌಮ್ಯ ಭವತ್ಯೇವಂ ಯಥಾತ್ಥ ಮಾಮ್ ॥ ೩೦ ॥**

**ಧೃತರಾಷ್ಟ್ರನು ಹೇಳಿದನು :** ನೀನು ಅನುದಿನವೂ ಯಾವ ರೀತಿಯಲ್ಲಿ ನನಗೆ ಉಪದೇಶಿಸುತ್ತಿರುವೆಯೋ ಅದು ಧರ್ಮವಿಹಿತವಾಗಿಯೇ ಇದೆ. ನೀನು ಹೇಗೆ ಉಪದೇಶಿಸುತ್ತಿರುವೆಯೋ ಅದರಂತೆಯೇ ನನ್ನ ವಿಚಾರವೂ ಇರುವುದು. ॥ ೩೦ ॥

**ಸಾ ತು ಬುದ್ಧಿಃ ಕೃತಾಪ್ಯೇವಂ ಪಾಂಡವಾನ್ ಪ್ರತಿ ಮೇ ಸದಾ।**
**ದುರ್ಯೋಧನಂ ಸಮಾಸಾದ್ಯ ಪುನರ್ವಿಪರಿವರ್ತತೇ ॥ ೩೧ ॥**

ಪಾಂಡವರ ವಿಷಯದಲ್ಲಿ ನೀನು ಹೇಳಿದಂತೆಯೇ ಮಾಡಬೇಕೆಂದು ನಾನು ದೃಢನಿಶ್ಚಯವುಳ್ಳವನಾಗಿದ್ದರೂ ಸಹ ದುರ್ಯೋಧನನ ಸಂಪರ್ಕವನ್ನು ಪಡೆದೊಡನೆಯೇ ನನ್ನ ನಿಶ್ಚಯವು ಬದಲಾಗಿ ಬಿಡುತ್ತದೆ. ॥ ೩೧ ॥

**ನ ದಿಷ್ಟಮಭ್ಯತಿಕ್ರಾಂತುಂ ಶಕ್ಯಂ ಭೂತೇನ ಕೇನಚಿತ್।**
**ದಿಷ್ಟಮೇವ ಧ್ರುವಂ ಮನ್ಯೇ ಪೌರುಷಂ ತು ನಿರರ್ಥಕಮ್ ॥ ೩೨ ॥**

ಯಾವ ಪ್ರಾಣಿಗೇ ಆಗಲಿ ವಿಧಿನಿಯಮವನ್ನು ಉಲ್ಲಂಘಿಸುವ ಸಾಧ್ಯತೆಯೇ ಇಲ್ಲ. ಆದುದರಿಂದ ವಿಧಿನಿಯಮವೇ ಶಾಶ್ವತವೆಂದು ನಾನು ಭಾವಿಸುತ್ತೇನೆ. ಪುರುಷಪ್ರಯತ್ನವು ನಿರರ್ಥಕವಾದುದು. ॥ ೩೨ ॥

ಇತಿ ಶ್ರೀಮಹಾಭಾರತೇ ಉದ್ಯೋಗಪರ್ವಣಿ ಪ್ರಜಾಗರಪರ್ವಣಿ
ವಿದುರವಾಕ್ಯೇ ಚತ್ವಾರಿಂಶೋಽಧ್ಯಾಯಃ ॥ ೪೦ ॥

# ಗೀತಾ ಪ್ರೆಸ್ ಗೋರಖಪುರ, (ಉ.ಪ) 273 005
## (ನಮ್ಮ ಕನ್ನಡ ಪ್ರಕಟಣೆಗಳು)

### ಪಾರಾಯಣ ಗ್ರಂಥಗಳು

೧ ಶ್ರೀಮದ್ಭಗವದ್ಗೀತೆ (ತತ್ತ್ವವಿವೇಚನೀ ಟೀಕೆ)
೨ ಶ್ರೀಮದ್ಭಗವದ್ಗೀತೆ (ಸಾಧಕ ಸಂಜೀವಿನೀ ಟೀಕೆ) (ಎರಡು ಭಾಗಗಳಲ್ಲಿ)
೩ ಶ್ರೀಮದ್ಭಗವದ್ಗೀತೆ (ಶ್ಲೋಕ, ಅನ್ವಯ, ಪದಚ್ಛೇದ, ತಾತ್ಪರ್ಯ ಸಹಿತ)
೪ ಶ್ರೀಮದ್ಭಗವದ್ಗೀತೆ (ಶ್ಲೋಕ, ತಾತ್ಪರ್ಯ ಸಹಿತ)
೫ ಶ್ರೀಮದ್ಭಗವದ್ಗೀತೆ (ಶ್ಲೋಕ, ತಾತ್ಪರ್ಯ ಸಹಿತ - ಪಾಕೆಟ್ ಸೈಜ್)
೬ ಶ್ರೀಮದ್ಭಗವದ್ಗೀತೆ - ವಿಷ್ಣುಸಹಸ್ರನಾಮ (ಮೂಲ)
೭ ಶ್ರೀ ವಿಷ್ಣುಸಹಸ್ರನಾಮ (ತಾತ್ಪರ್ಯ, ನಾಮಾವಳಿ ಸಹಿತ)
೮ ಶ್ರೀ ವಿಷ್ಣುಸಹಸ್ರನಾಮ ನಾಮಾವಳಿ ಸಹಿತ (ಮೂಲ)
೯ ಹನುಮತ್ ಸ್ತೋತ್ರಾವಳಿ - ಹನುಮಾನ್ ಚಾಲಿಸಾ
೧೦ ನಿತ್ಯ ಸ್ತುತಿ - ಆದಿತ್ಯ ಹೃದಯ
೧೧ ಶ್ರೀ ದುರ್ಗಾ ಸಪ್ತಶತಿ (ಮೂಲ)
೧೨ ಶ್ರೀ ಲಲಿತಾ ಸಹಸ್ರನಾಮ ಸ್ತೋತ್ರ - ನಾಮಾವಳಿ ಸಹಿತ
೧೩ ಶ್ರೀರಾಮಚರಿತ ಮಾನಸ ಸುಂದರ ಕಾಂಡ (ಅರ್ಥಸಹಿತ)
೧೪ ಗಜೇಂದ್ರ ಮೋಕ್ಷ
೧೫ ಗೀತಾಮಾಹಾತ್ಮ್ಯದ ಕಥೆಗಳು
೧೬ ಶ್ರೀರಾಮಚರಿತ ಮಾನಸ ಸಟೀಕ
೧೭ ಸಾರ್ಥಜ್ಞಾನೇಶ್ವರಿ
೧೮ ಶ್ರೀಮದ್ಭಾಗವತ ಅನುವಾದ ಸಹಿತ (೨ ಖಂಡಗಳಲ್ಲಿ)
೧೯ ಈಶಾವಾಸ್ಯೋಪನಿಷತ್
೨೦ ವಾಲ್ಮೀಕೀಯ ಸಂಕ್ಷಿಪ್ತರಾಮಾಯಣ
೨೧ ವಾಲ್ಮೀಕಿ ರಾಮಾಯಣ ಸುಂದರಕಾಂಡ

## ಉಪದೇಶಪರ ಗ್ರಂಥಗಳು

೧ ಭಗವಂತನ ದಯೆ ಮತ್ತು ಭಗವಂತನ ಹೇತುರಹಿತ ಸೌಹ
೨ ನಾಮ ಜಪದ ಮಹಿಮೆ ಮತ್ತು ಆಹಾರ ಶುದ್ಧಿ
೩ ಸತ್ಯದ ಶರಣಾಗತಿಯಿಂದ ಮುಕ್ತಿ-ಗೀತಾಪಠಣದ ಲಾಭ
೪ ಬಾಲ ಶಿಕ್ಷಾ
೫ ದೇಶದ ವರ್ತಮಾನ ಸ್ಥಿತಿ ಹಾಗೂ ಅವುಗಳ ಪರಿಣಾಮ
೬ ಸ್ತ್ರೀಯರಿಗೆ ಕರ್ತವ್ಯ ಶಿಕ್ಷಣ
೭ ಗರ್ಭಪಾತವು ಉಚಿತವೇ ಅಥವಾ ಅನುಚಿತವೇ ನಿಮ್ಮ ನಿಣ
೮ ಗೃಹಸ್ಥಾಶ್ರಮದಲ್ಲಿ ಹೇಗಿರಬೇಕು
೯ ಸಾಧನ ನವನೀತ
೧೦ ಮಹಾಪಾಪದಿಂದ ಪಾರಾಗಿರಿ
೧೧ ಪ್ರತ್ಯಕ್ಷ ಭಗವದ್ದರ್ಶನದ ಉಪಾಯ (ಭಕ್ತಿಯೋಗದ ತತ್ತ್ವ
೧೨ ಮಹಿಳೆಯರಿಗೆ ಮಾರ್ಗದರ್ಶನ
೧೩ ನವಧಾ ಭಕ್ತಿ
೧೪ ಸಂಧ್ಯಾವಂದನೆ ಮತ್ತು ಗಾಯತ್ರೀ ಮಹಿಮೆ
೧೫ ಕರ್ಮ ರಹಸ್ಯ
೧೬ ಶರಣಾಗತಿ
೧೭ ಭಗವತ್ ಪ್ರಾಪ್ತಿಯ ಸುಗಮತೆ
೧೮ ಅಮೂಲ್ಯ ಸಮಯದ ಸದುಪಯೋಗ
೧೯ ವಾಸ್ತವಿಕ ಸುಖ
೨೦ ಗೀತಾಮಾಧುರ್ಯ
೨೧ ಭಗವತ್ ಕೃಪೆ
೨೨ ಉದ್ಧಾರ ಹೇಗಾಗಬಹುದು?